# ಲುಷ್‌ನ್‌ರ ಎರಡು ನೀಳ್ಗತೆಗಳು

## (ಲುಷನರ ಚೀನಿ ಕಥೆಗಳು)



ಅನುವಾದ : ಡಾ|| ವಿಜಯ ಸುಬ್ಬರಾಜ್

# ಲುಷನ್‌ರ ಎರಡು ನೀಳ್ಗತೆಗಳು

ಮೂಲ: ಲುಷನ್‌ರ ಚೀನಿ ಕತೆಗಳು

ಅನುವಾದ: ಡಾ.ವಿಜಯಾ ಸುಬ್ಬರಾಜ್

ಅಕ್ಷಯ ಪಬ್ಲಿಷರ್ಸ್

ನಂ.87, "ಗುರುಕೃಪ"11ನೇ ಮುಖ್ಯರಸ್ತೆ, 3ನೇ ಹಂತ,

ಗಿರಿನಗರ, ಬೆಂಗಳೂರು-85, ದೂರವಾಣಿ: 26745248

LUSHANRA ERADU NEELGATHEGLU: Stories are translated by Dr. Vijaya Subbaraj, Published by Akshaya publishers, No. 87, 'Gurukrupa', 11th Main, 3rd Phase, Girinagar, Bangalore -85, Ph:26745248

ಪುಟಗಳು : 85

ಪ್ರಥಮ ಮುದ್ರಣ : 2004

ಮುಖಪುಟ : ಮದುಸೂಧನ್



ಬೆಲೆ : ರೂ 50/-

ಡಿ.ಟಿ.ಪಿ : ಹೆಗಡೆ ಗ್ರಾಫಿಕ್ಸ್,
ಹನುಮಂತನಗರ,
ಬೆಂಗಳೂರು- 560 019

ಮುದ್ರಣ : ರವಿ ಪ್ರಿಂಟರ್ಸ್,
ವಿಜಯನಗರ
ಬೆಂಗಳೂರು-40

# ನನ್ನ ಮಾತು

ಹಲವಾರು ವರ್ಷಗಳ ಹಿಂದೆ 'ಚೈನೀಸ ಲಿಟರೇಚರ್ ' ಎಂಬ ಪತ್ರಿಕೆಯೊಂದನ್ನು ತರಿಸುತ್ತಿದೆ. ಕುತೂಹಲಕ್ಕಾಗಿ ಅಲ್ಲಿನ ಕೆಲವು ಕವಿತೆಗಳನ್ನು, ಕತೆಗಳನ್ನು ಓದುತ್ತ ಇರುವುದರ ಜೊತೆಗೆ ನನ್ನ ಪಿ.ಎಚ್.ಡಿ.ಗಾಗಿ ಚೀನಾದ ಅಪೆರಾಗಳನ್ನು ಓದತೊಡಗಿದೆ. ಅದಾವ ಕಾರಣಕ್ಕೋ ಏನೋ ಒಂದು ಬಗೆಯ ಪ್ರೀತಿಯನ್ನೂ ಚೈನಾ ಸಾಹಿತ್ಯದ ಬಗ್ಗೆ ಮೂಡಿಸಿಕೊಂಡೆ. ಅನೇಕ ಸಲ ಸಾಹಿತ್ಯದಲ್ಲಿ ಕಾಣಿಸಿಕೊಂಡ ಹಲ ಕೆಲವು ಸಾಂಸ್ಕೃತಿಕ ವಿಚಾರಗಳು, ವಿಧಿಗಳು ನಮ್ಮ ಸಂಸ್ಕೃತಿಯೊಂದಿಗೆ ಸಾದೃಶ್ಯವಿರುವುದನ್ನು ಗಮನಿಸಿದೆ. ಇನ್ನಷ್ಟು ಓದಬೇಕೆನಿಸಿತು.

ಇಂಗ್ಲೀಷ್ ಸಾಹಿತ್ಯವನ್ನು ಜಗತ್ತಿನಾದ್ಯಂತ ಓದುವ ಅನುವಾದಿಸುವ ಕೆಲಸ ನಡೆಯುತ್ತಿದೆ. ಹಾಗಿರುವಾಗ ನಾನೇಕೆ ಚೀನಾ ಸಾಹಿತ್ಯವನ್ನು ಓದಬಾರದೆನಿಸಿದಾಗ, 'ಲುಷನ್ 'ರ ಸಾಹಿತ್ಯ ನನ್ನ ಕಣ್ಣಿಗೆ ಬಿತ್ತು. ಓದಿದೆ. ಆತನ ಒಂದಷ್ಟು ಕವಿತೆಗಳನ್ನು 'ಅನಿಕೇತನ ' ಪತ್ರಿಕೆಗೆ ಅನುವಾದಿಸಿಕೊಟ್ಟೆ. ಹಾಗೆಯೇ ಅವರ ಕತೆಗಳನ್ನು ಅನುವಾದಿಸಬಾರದೇಕೆನಿಸಿ, ಅನುವಾದಕ್ಕೆ ಕೈ ಹಚ್ಚಿದೆ.

ಒಂದಷ್ಟು ಕತೆಗಳನ್ನು ಅನುವಾದಿಸುತ್ತಿದ್ದಾಗಲೇ ಪ್ರಖಾಶನದ ಅವಕಾಶವೂ ಸಿಕ್ಕಿತು. ಶ್ರೀಮಾನ್ ಜಯಪ್ರಕಾಶ್ ಹೆಗಡೆಯವರು ನನ್ನ ಈ ಅನುವಾದಿತ ಕಥಾ ಸಂಕಲನವನ್ನು ಪ್ರಕಟಿಸಲು ಮುಂದಾಗಿರುವುದು ನನಗೆ ಸಂತೋಷ ತಂದಿದೆ. ಅವರಿಗೆ ನನ್ನ ಕೃತಜ್ಞತೆಗಳು, ಹಾಗೆಯೇ ಮುಖಪುಟವನ್ನು ರಚಿಸಿಕೊಟ್ಟವರಿಗೂ ನನ್ನ ಧನ್ಯವಾದಗಳು.

ಡಾ. ವಿಜಯಾ ಸುಬ್ಬರಾಜ್

# ಕಥೆಗಾರ ಲುಷನ್‌ರ ಬಗ್ಗೆ ಒಂದೆರಡು ಮಾತು

೧೮೮೧-೧೯೩೬ ರ ನಡುವಿನಲ್ಲಿ ಬದುಕಿದ್ದ ಲುಷನ್ ಚೀನಾದ ಅತ್ಯಂತ ಪ್ರಭಾವಿ ವ್ಯಕ್ತಿ. ಚಿಂತಕ, ಕ್ರಾಂತಿಕಾರಿ ಮನೋಭಾವದ ಲುಷನ್ ಸಮಾಜದ ಕೆಳವರ್ಗದವರ ಬಗ್ಗೆ ಅತ್ಯಂತ ಕಾಳಜಿಯುಳ್ಳವನಾಗಿದ್ದ. ಇದೇ ಕಾರಣದಿಂದಾಗಿ ೧೯೧೧ರಲ್ಲಿ ನಡೆದ ಪ್ರಜಾಪ್ರಭುತ್ವ ಕ್ರಾಂತಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ತನ್ನ ಸೃಜನಶೀಲ ಬರವಣಿಗೆಯನ್ನು ಈ ಕ್ರಾಂತಿ, ಹೋರಾಟದಲ್ಲಿ ಪ್ರಬಲ ಅಸ್ತ್ರವಾಗಿ ಬಳಸಿಕೊಂಡ. ೨೦೦೦ ವರ್ಷಗಳಿಗೂ ಹೆಚ್ಚಾಗಿ ದೇಶವನ್ನಾಳಿದ 'ಕಿಂಗ್ 'ವಂಶವನ್ನು ಗದ್ದುಗೆಯಿಂದ ಇಳಿಸಿದರೂ ಊಳಿಗಮಾನ್ಯ ವ್ಯವಸ್ತೆಯಿಂದ ವಸಾಹತುಶಾಹಿ ವ್ಯವಸ್ಥೆಯಿಂದ ಪೂರ್ತಿಯಾಗಿ ಬಿಡುಗಡೆ ಹೊಂದಲು ಸಾಧ್ಯವಾಗಲಿಲ್ಲ. ಇದರ ಬಗ್ಗೆ ಲುಷನ್ ಗಂಭೀರವಾಗಿ ಚಿಂತನೆ ನಡೆಸಿ ಕ್ರಾಂತಿ ಚಳುವಳಿಯ ಸೋಲಿಗೆ ಕಾರಣಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ. ಈತ ಎಡ ಪಂಥೀಯ ಸಾಂಸ್ಕೃತಿಕ ಚಳುವಳಿಯ ಮುಂಚೂಣಿಯಲ್ಲಿ ನಿಂತ. ಅಧ್ಯಕ್ಷರಾಗಿದ್ದ ಮಾವೋರವರು ಲುಷನ್ ಬಗ್ಗೆ ಮಾತನಾಡುತ್ತ, "ಆತ ಹಿಡಿದ ದಾರಿ ಚೀನಾದ ನವ ರಾಷ್ಟ್ರೀಯ ಸಂಸ್ಕೃತಿಯ ದಾರಿಯೇ ಆಗಿತ್ತು" ಎಂದು ಮುಕ್ತವಾಗಿ ಹೊಗಳಿದ್ದರು.

ಲುಷನ್ ಚೀನ ಸಂಸ್ಕೃತಿಗೆ ತನ್ನ ಅಪಾರವಾದ ಸಾಹಿತ್ಯ ರಾಶಿಯನ್ನು ಬಳುವಳಿಯಾಗಿ ಬಿಟ್ಟಿದ್ದಾನೆ. ತನ್ನ ಪ್ರಬಂಧಗಳನ್ನು, ಸಣ್ಣ ಕತೆಗಳನ್ನು ಹೋರಾಟದ ಸಂದರ್ಭಕ್ಕೆ ಬಳಸಿಕೊಂಡ. ಬರೆದದ್ದು ಕೆವಲ ಎಪ್ಪತ್ತು ಕವಿತೆಗಳು ಮಾತ್ರವಾದರೂ, ಚಿಕ್ಕ ಚಿಕ್ಕದಾದ ಆ ಕವಿತೆಗಳು ಕಲಾತ್ಮಕವಾಗಿ, ವೈಶಿಷ್ಟ್ಯ ಪೂರ್ಣವಾಗಿದ್ದು ಜನರ ಮನಸ್ಸನ್ನು ಸೆಳೆದುಕೊಂಡಿವೆ. ಬರೆಯುವುದಕ್ಕೆ ತೊಡಗಿಕೊಂಡಾಗ, ತನ್ನ ಕ್ರಾಂತಿ, ಹೋರಾಟಗಳನ್ನು ಮುಂದುವರೆಸಲು, ಪುಷ್ಟಿಗೊಳಿಸಲು ಕವಿತೆಗಳಲ್ಲಿರುವ ಪ್ರಚಂಡ ಶಕ್ತಿಯನ್ನು ಕಂಡುಕೊಂಡ. "ಆನ್ ಎ ಫೋಟೋಗ್ರಾಫ್ ಆಫ್ ಹಿಮ್‌ಸೆಲ್ಫ್" ಎಂಬ ಕವಿತೆಯಲ್ಲಿ ಆತನ ದೇಶಾಭಿಮಾನ, ಜನರ ಬಗೆಗಿನ ಪ್ರೀತಿ, ಸ್ವಾತಂತ್ರ್ಯದೆಡೆಗೆ ಕೊಂಡೊಯ್ಯಬೇಕೆಂಬ ತುಡಿತ ಇತ್ಯಾದಿಗಳು ಒಡೆದೆದ್ದು ಕಾಣುತ್ತವೆ.

೧೯೧೮ರಲ್ಲಿ, ಅಕ್ಟೋಬರ್ ಕ್ರಾಂತಿಯಿಂದ ಪ್ರಭಾವಿತವಾಗಿ ಚೀನ ದೇಶ ಕ್ರಾಂತಿಕಾರಿ ಸಾಹಿತ್ಯ ಚಳುವಳಿಯೊಂದನ್ನು ಹುಟ್ಟು ಹಾಕಿತು. 'ಊಳಿಗ ಮಾನ್ಯ' ವ್ಯವಸ್ಥೆಯ್ನು ವಿರೋಧಿಸುವ ಹಿನ್ನೆಲೆಯೊಂದಿಗಿದ್ದ ಈ ಚಳುವಳಿ ಜನಸಾಮಾನ್ಯರ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಬೇಕೆಂದು ಒತ್ತು ನೀಡಿತು. ಲುಷನ್ ಇದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಕತೆಗಳನ್ನು, ಪ್ರಬಂಧಗಳನ್ನು ಮತ್ತು ಕವಿತೆಗಳನ್ನೂ ಬರೆದ. ಅದೆಲ್ಲವೂ ಜನಸಾಮಾನ್ಯರ ಭಾಷೆಯಲ್ಲಿಯೇ ಇತ್ತು.

ಒಂದಷ್ಟು ಕವಿತೆಗಳನ್ನು ಬರೆದರೂ, ಕವಿತೆ ಅವನ ಪ್ರೀತಿಯ ಮಾಧ್ಯಮವಾಗಿರಲಿಲ್ಲ. ತನ್ನ ದುಗುಡ, ಒಂಟಿತನ, ಹತಾಶೆ, ಇತ್ಯಾದಿ ಸಂದರ್ಭಗಳಲ್ಲಿ ತನ್ನ ಬದುಕಿನ ಅನುಭವದ ಕಣಗಳ್ನು ತಾನು ಭೇಟಿಯಾಗುತ್ತಿದ್ದ ವ್ಯಕ್ತಿಗಳನ್ನು ಕತೆಯಾಗಿಸುವ ಪ್ರಯತ್ನದಲ್ಲಿ ತೊಡಗಿಸಿಕೊಂಡ. ಲುಷನ್‌ನ ಕತೆಗಳಲ್ಲಿ ಕಾಣುವ ಸರಳತೆ, ವಾಸ್ತವತೆ, ಆಪ್ತತೆ, ಪ್ರಾಮಾಣಿಕತೆಗಳು - ಅವನ ಕತೆಗಳ ವೈಶಿಷ್ಟ್ಯಗಳಾಗಿವೆ. ತನ್ನ ಕತೆಗಳ ಬಗ್ಗೆ ಒಂದು ಕಡೆ ಆತ, "ನನ್ನ ಕತೆಗಳಲ್ಲಿ ಕಲಾತ್ಮಕತೆಯ ಕೊರತೆಯಿದೆ. ಆದರೂ ಅವುಗಳನ್ನು ಕತೆಗಳೆಂದು ಗುರುತಿಸಿ ಒಂದು ಸಂಕಲನವಾಗಿ ಹೊರತರುತ್ತಿರುವುದು ನನ್ನ ಅದೃಷ್ಟ. ಈ ಅದೃಷ್ಟವನ್ನು ನೆನಸಿಕೊಂಡಾಗಲೂ ನನಗೆ ಸಂಕೋಚವಾಗುತ್ತದೆ. ಆದರೆ ಇಷ್ಟೊಂದು ಸಂಖ್ಯೆಯ ಓದುಗರು ನನ್ನ ಕತೆಗಳಿಗಿದ್ದಾರೆಂಬುದೇ ನನಗೆ ಹೆಚ್ಚಿನ ಸಂತೋಷವನ್ನುಂಟು ಮಾಡಿದೆ." ಎಂದು ಹೇಳಿರುವಲ್ಲಿ ಲುಷನ್‌ರ ವಿನಯ ಎದ್ದು ಕಾಣುತ್ತದೆ.

# ಪರಿವಿಡಿ

# ಆಹ್ ಕ್ಯೂನ ನೈಜ ಕತೆ

ಬಹಳ ವರ್ಷಗಳಿಂದ ಆಹ್ ಕ್ಯೂನ್ ನೈಜ ಕತೆಯುನ್ನು ಬರೆಯಬೇಕೆಂದುಕೊಳ್ಳುತ್ತಿದ್ದೇನೆ. ಬರೆಯುವ ಆಸೆಯೇನೋ ಇದೆಯಾದರೂ, ನಾನು ಅಂತಹ ಒಳ್ಳೆಯ ಬರಹಗಾರನಲ್ಲವಾದ್ದರಿಂದ ಬರೆಯಲು ಒಂದು ಥರಾ ಹೆದರಿಕೆ. ಅಮರನಾಗಿ ಉಳಿಯಬಲ್ಲ ವ್ಯಕ್ತಿಯನ್ನು ಅಮರವಾಗಿಸಲು, ಅಮರವಾದ ಲೇಖನಿಯೊಂದರ ಅಗತ್ಯವಿದೆ. ಅಮರನಾಗುವ ವ್ಯಕ್ತಿಯ ಕಾರ್ಯಗಳನ್ನು ದಾಖಲಿಸಿ, ಮುಂದಿನ ತಲೆಮಾರುಗಳಿಗೆ ಆತನನ್ನು ಪರಿಚಯಿಸಲು, ಆತನ ಮೂಲಕ ಬರವಣಿಗೆಯನ್ನು ಮುಂದಿನ ಪೀಳಿಗೆಗಳಿಗೆ ಉಳಿಸಲು ಅದ್ಭುತವಾದ ಲೇಖನಿಯು ಬೇಕಾಗುತ್ತದೆ. ಯಾವುದು ಯಾವುದರಿಂದ ಪರಿಚಯವಾಗಬಲ್ಲುದೆಂದು ಹೇಳುವುದು ಸ್ಪಷ್ಟವಾಗಿಲ್ಲ. ಆದರೂ ನನ್ನಲ್ಲಿ ಏನೋ ಆವೇಶ ಬಂದಂತಾಗಿ ಆಹ್ ಕ್ಯೂ ನ ಕತೆಯನ್ನು ಬರೆಯಲೇಬೇಕೆಂಬ ನಿಲುವಿಗೆ ಬಂದಿದ್ದೇನೆ.

ನಾನು ಬರೆಯಲು ಆರಂಭಿಸಿದ್ದೇ ತಡ. ಇಂತಹ ಅಮರವಾದ್ದನ್ನು ಬರೆಯಲು ಎಷ್ಟು ಕಷ್ಟ ಎಂಬ ಅರಿವುಂಟಾಯಿತು. ಅದನ್ನು ಏನೆಂದು ಕರೆಯಬೇಕೆಂಬುದು ಮೊದಲ ಪ್ರಶ್ನೆಯಾಯಿತು. ಕನ್‌ಫ್ಯೂಸಿಯಸ್ ಹೇಳಿದ "ಹೆಸರು ಸರಿಯಿಲ್ಲದಿದ್ದರೆ, ಶಬ್ಧಗಳಲ್ಲಿ ಸತ್ಯ ಕೇಳಿಸುವುದಿಲ್ಲ" ಈ ನಾಣ್ಣುಡಿಯನ್ನು ಬಹಳ ಜಾಗರೂಕತೆಯಿಂದ ಗಮನಿಸಬೇಕಾಗುತ್ತದೆ. ಎಷ್ಟೊಂದು ಬಗೆಯ ಜೀವನ ಚರಿತ್ರೆಗಳಿವೆ. ಅಧಿಕೃತ, ಅನಧಿಕೃತ, ಪುರಾಣಗಳು, ಪೂರಕ ಚರಿತ್ರೆಗಳು ವಂಶ ಚರಿತ್ರೆಗಳು, ಚಿತ್ರಗಳು - ಇತ್ಯಾದಿ ಇತ್ಯಾದಿ. ಆದರೆ ಇವುಗಳಲ್ಲಿ ಯಾವೊಂದೂ ನನ್ನ ದೃಷ್ಟಿಗೆ ಸಮುಚಿತವೆನಿಸಲಿಲ್ಲ. ಅಧಿಕೃತ ಜೀವನ ಚರಿತ್ರೆ? ಇದು ಪ್ರಮುಖ ವ್ಯಕ್ತಿಗಳ ಚರಿತ್ರೆಯ ಜೊತೆಗೆ ಸೇರಿಸಲಾಗುವುದಿಲ್ಲ. ಆತ್ಮ ಚರಿತ್ರೆ?... ನಾನಂತೂ ಆಹ್ ಕ್ಯೂ ಅಲ್ಲ. ಹೋಗಲಿ ಇದನ್ನು ಅನಧಿಕೃತ ಜೀವನ ಚರಿತ್ರೆ ಎನ್ನೋಣವೆಂದರೆ ಅಧಿಕೃತ ಜೀವನ ಚರಿತ್ರೆ ಎಲ್ಲಿದೆ? ಪುರಾಣ ಎನ್ನುವುದೇ? ಆಹ್ ಕ್ಯೂ ಪುರಾಣ ವ್ಯಕ್ತಿ ಅಲ್ಲವೇ ಅಲ್ಲ. ಪೂರಕ ಚರಿತ್ರೆ ಎನ್ನಲು. ಯಾವ ಅಧ್ಯಕ್ಷನೂ ರಾಷ್ಟೀಯ ಇತಿಹಾಸ ಸಂಸ್ಥೆಗೆ ಆಹ್ ಕ್ಯೂ ನ

ಪ್ರಮಾಣ ಬದ್ಧ ಚರಿತ್ರೆಯನ್ನು ಬರೆಯಲು ಆದೇಶಿಸಿಲ್ಲ. ಅಧಿಕೃತ ಇಂಗ್ಲಿಷ್ ಇತಿಹಾಸದಲ್ಲಿ ಜೂಜುಗಾರರ ಜೀವನ ಚರಿತ್ರೆಗಳು ಇಲ್ಲವೆನ್ನುವುದು ಸತ್ಯ. ಆದರೆ ಕೊನಾನ್ ಡೈಲ್ ರೋಡ್ನಿ ಸ್ಟೋನ್ ಎಂಬುದನ್ನು ಬರೆದಿದ್ದಾನೆ. ಅವನಂತಹ ವ್ಯಕ್ತಿಗೆ ಅದನ್ನು ಬರೆಯಲು ಅಧಿಕಾರ ಇದೆ. ಆದರೆ ನನ್ನಂತಹ ಸಾಮಾನ್ಯನಿಗೆ?.... ಸಾಧ್ಯವೇ ಇಲ್ಲ. ವಂಶ ಚರಿತ್ರೆ ಎಂದುಕೊಂಡರೆ. ನಾನು ಆಹ್ ಕ್ಯೂ ವಂಶಕ್ಕೆ ಸೇರಿದವನೇ? ಅಲ್ಲವೇ? ಗೊತ್ತಿಲ್ಲ. ಅವನ ಮಕ್ಕಳಾಗಲೀ ಮೊಮ್ಮಕ್ಕಳಾಗಲೀ, ಅವನ ಇತಿಹಾಸವನ್ನು ಬರೆಯಲು ನನ್ನನ್ನು ಕೇಳಿಕೊಳ್ಳಲೂ ಇಲ್ಲ. ನನಗೆ ಒಪ್ಪಿಸಿಯೂ ಇಲ್ಲ. ಚಿತ್ರವೆಂದರೆ ಅದೂ ಸರಿಯಾಗುವುದಿಲ್ಲ. ಯಾಕೆಂದರೆ ಆಹ್ ಕ್ಯೂನ ಪೂರ್ಣ ವಿವರಗಳಿಲ್ಲ. ಸಂಕ್ಷೇಪವಾಗಿ ಹೇಳುವುದಾದರೆ ಇದು 'ಜೀವನ.' ನಾನು ತೀರಾ ಸಾಮಾನ್ಯವಾದ ಜನರ ಆಡು ಭಾಷೆಯಲ್ಲಿ ಬರೆಯಲು ಹೊರಟಿರುವುರಿಂದ ಅದ್ದೂರಿ ಶೀರ್ಷಿಕೆಯನ್ನೂ ಕೊಡಲಾಗುವುದಿಲ್ಲ. ಆದ್ದರಿಂದ, ಮೂರು ಸಂಪ್ರದಾಯಗಳ, ಒಂಬತ್ತು ಶೈಲಿಗಳ ಗುಂಪಿಗೆ ಸೇರದ ಕಾದಂಬರಿಕಾರರು ಸಾಮಾನ್ಯವಾಗಿ ಬಳಸುವ ವಾಕ್ಯ ಖಂಡಗಳಿಂದಲೇ ತೆಗೆದುಕೊಳ್ಳುತ್ತೇನೆ. ಇನ್ನು ಈ ವಿಷಯಾಂತರ ಸಾಕು; ಸತ್ಯಕತೆಯತ್ತ ತಿರುಗೋಣ! ಇದರಲ್ಲಿ ಕಡೆಯಲ್ಲಿನ ಎರಡು ಪದಗುಚ್ಛಗಳನ್ನು ತೆಗೆದುಕೊಳ್ಳುತ್ತೇನೆ. ನೋಡು ಎರಡು ಪದಗುಚ್ಛಗಳನ್ನು ತೆಗೆದುಕೊಳ್ಳುತ್ತೇನೆ. ನೋಡುತ್ತೇನೆ ಎಷ್ಟರಮಟ್ಟಿಗೆ ಹಿಂದಿನ ಕಾಲದ ಟ್ರೂ ಸ್ಟೋರಿ ಆಫ್ ಕ್ಯಾಲಿಗ್ರಫಿ ಯನ್ನು ನೆನಪಿಸುತ್ತದೆ!

ನನಗೆ ಎದುರಾಗಿರುವ ಮತ್ತೊಂದು ತೊಂದರೆ ಅಂದ್ರೆ, ಈ ಬಗೆಯ ಜೀವನ ಚರಿತ್ರೆ, ಅಂದರೆ ಸಾಮಾನ್ಯವಾಗಿ ಪ್ರಾರಂಭವಾಗುವ ಇಂತಿಂಥಾದ್ದು, ಇಂಥವನ ಹೆಸರು, ಇಂಥಾದ್ದು, ಇಂಥವನದು, ಇಂಥಾ ಊರು, ಇತ್ಯಾದಿ. ಆದರೆ ಆಹ್ ಕ್ಯೂನ ಉಪನಾಮ ಏನೆಂದು ನನಗೆ ಗೊತ್ತಿಲ್ಲ. ಒಂದು ಸಲ ಅವನನ್ನು ಚಾನ್ ಎಂದು ಹೆಸರಿಸಿದ್ದರು. ಆದರೆ ಮಾರನೇ ದಿನ ಇದೇ ವಿಷಯದ ಮೇಲೆ ಸ್ವಲ್ಪ ಗೊಂದಲ ಇತ್ತು. ಮಿಸ್ಟರ್ ಚಾವೋನ ಮಗ ಊರಿನ ಪರೀಕ್ಷೆ ಪಾಸಾಗಿ, ಪಾಸಾದದ್ದನ್ನು ಊರಿಗೆಲ್ಲ ಘೋಷಿಸಿದ ಮೇಲೆ ಇಂತಹ ಗೊಂದಲ ಶುರುವಾಯಿತು. ಆಹ್ ಕ್ಯೂ ಹಳದಿ ದ್ರವದ ಎರಡು ಬಟ್ಟಲನ್ನು ಕುಡಿದ ಮೇಲೆ, ಈ ಪಾಸಾಗಿರುವ ವಿಷಯ ತನಗೂ ಹೆಸರು ತರುವಂಥಾದ್ದು ಎಂದು ಹೇಳಿಕೊಂಡ ಅಡ್ಡಾಡಿದ. ಯಾಕೆಂದರೆ, ಅವನೂ ಅದೇ ವಂಶಕ್ಕೆ ಸೇರಿದವನಾಗಿದ್ದ. ಸರಿಯಾಗಿ ಹೇಳಬೇಕೆಂದರೆ ಪಾಸಾದ ವಿದ್ಯಾರ್ಥಿಯ

ಮೂರು ತಲೆಮಾರು ಹಿರಿಯನಾಗಿದ್ದ - ಎಂದೆಲ್ಲ ಹೇಳಿಕೊಂಡ. ಅಕ್ಕಪಕ್ಕದಲ್ಲಿ ನಿಂತಿದ್ದವರಿಗೂ ಸ್ವಲ್ಪ ಮುಜುಗರ ಎನಿಸಿತು. ಮಾರನೆ ದಿನ ಬೈಲಿಫ್ ಅಥವಾ ದಂಡಾಧಿಕಾರಿ ಆಹ್ ಕ್ಯೂನನ್ನು ಚಾನ್ ಮನೆಗೆ ಬರುವಂತೆ ಮಾಡಿದ. ಮುದಿ ಸಜ್ಜನ ಆತನ ಕಡೆ ನೋಡಿದ್ದೆ ಸಿಟ್ಟಿನಿಂದ ಕೆಂಪಾದ, ಗುಡುಗಿದ.

"ಆಹ್ ಕ್ಯೂ, ಬಡ್ಡಿಮಗನೆ, ನಾನು ನಿನ್ನ ವಂಶಕ್ಕೆ ಸೇರಿದವನೆಂದು ಹೇಳಿದೆಯಾ?"

ಆಹ್ ಕ್ಯೂ ಮಾತಾಡಲಿಲ್ಲ.

ಅವನತ್ತ ನೋಡಿದಷ್ಟೂ ಚಾವೋ ಮತ್ತಷ್ಟು ಸಿಟ್ಟಾಗುತ್ತಿದ್ದ. ಒಂದೆರಡು ಹೆಜ್ಜೆ ಮುಂದೆ ಬಂದು ಹೇಳಿದ - "ಇಂಥ ತಲೆ ಹರಟೆ ಮತಾಡೋಕೆ ನಿನಗೆಷ್ಟೋ ಧೈರ್ಯ! ನಿನ್ನಂಥವನು ನನಗೆ ಬಂಧುವೆ? ನಿನ್ನ ಉಪನಾಮ ಚಾವೋ ನಾ?"

ಆಹ್ ಕ್ಯೂ ಉತ್ತರಿಸಲಿಲ್ಲ. ಅಲ್ಲಿಂದ ಕಾಲ್ತೆಗೆಯಲು ಯತ್ನಿಸುತ್ತಿದ್ದಂತೆ ಚಾವೋ ಅವನಿಗೆ ಹತ್ತಿರ ಬಂದು ಕೆನ್ನೆಗೆ ಬಂದು ಅಪ್ಪಳಿಸಿದ. "ಚಾವೋಂತ ಹೆಸರಿಡಲು ನೀನು ಯೋಗ್ಯನೇ? ಆ ಹೆಸರಿನ ಯೋಗ್ಯತೆ ನಿನ್ನಲ್ಲಿದೆಯೇನೋ?"

ಆಹ್ ಕ್ಯೂ ಆ ಹೆಸರನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನೇನೂ ಮಾಡಲಿಲ್ಲ. ಎಡಗೆನ್ನೆಯನ್ನು ಮೆಲ್ಲಗೆ ಸವರಿಕೊಳ್ಳುತ್ತ ಬೈಲಿಫ್‌ನ ಜೊತೆ ಹೊರಗೆ ಹೋದ. ಹೊರಗಡೆ ಬಂದ ಮೇಲೆ ಬೈಲಿಫ್‌ನಿಂದ ಇನ್ನಷ್ಟು ಬೈಸಿ ಕೊಳ್ಳಬೇಕಾಯಿತು. ಜೊತೆಗೆ ಇನ್ನೂರು ರೂಪಾಯಿ ಕಾಣಿಕೆ ನೀಡಬೇಕಾಯಿತು. ಇದನ್ನೆಲ್ಲ ಕೇಳಿದವರು, ಇಷ್ಟೊಂದೆಲ್ಲ ಹೊಡೆಸಿಕೊಳ್ಳೋ ಮುಠ್ಠಾಳತನಕ್ಕೆ ಯಾಕೆ ಹೋಗಬೇಕಿತ್ತು ಎಂದರು. ಅವನ ಉಪನಾಮ ಚಾವೋ ನೇ ಆಗಿದ್ದರೂ, (ನಿಜವಾಗಿ ಅದಾಗಿರಲಿಲ್ಲ) ಹೀಗೆಲ್ಲ ಹೊಗಳಿಕೊಳ್ಳೋಕೆ ಹೋಗಬಾರದಾಗಿತ್ತು. ಇದಾದ ಮೇಲೆ ಆಹ್ ಕ್ಯೂನ ಪೂರ್ವಜರ ಬಗ್ಗೆ ಮಾತೇ ಇರಲಿಲ್ಲ. ಈಗಲೂ ನನಗೆ ಅವನ ನಿಜವಾದ ಉಪನಾಮ ಏನೆಂದು ಗೊತ್ತೇ ಇಲ್ಲ.

ಮೂರನೆ ತೊಂದರೆ ನನಗೆ ಎದುರಾದದ್ದು, ಇದನ್ನು ಬರೆಯುವಾಗ ಎಂದರೆ, ಆಹ್ ಕ್ಯೂನ ಖಾಸಗಿಯಾಗಿ ಅಥವಾ ವೈಯಕ್ತಿಕವಾಗಿ ಹೇಗೆ ಬರೆಯಬೇಕು ಅನ್ನೋದು! ಅವನು ಬದುಕಿದ್ದಾಗ ಪ್ರತಿಯೊಬ್ಬರೂ ಅವನನ್ನು ಆಹ್ ಕೀ ಎಂದು ಕರೆಯುತ್ತಿದ್ದರು. ಆದರೆ ಅವನು ಸತ್ತ ಮೇಲೆ ಯಾರೊಬ್ಬರೂ ಅ ಹೆಸರನ್ನು ಮತ್ತೆ

ಪ್ರಸ್ತಾಪ ಮಾಡಲಿಲ್ಲ. ಯಾಕೇಂದ್ರೆ ಮರದ ಹಲಗೆ ಮೇಲೋ ಸಿಲ್ಕ್ ಪರದೆಗಳ ಮೇಲೋ ಬರೆದು ಉಳಿಸಿಕೊಳ್ಳಬೇಕಾದಂತಹ ಹೆಸರಾಗಿರಲಿಲ್ಲ ಅವನದು. ಅವನ ಹೆಸರನ್ನು ಉಳಿಸಿಕೊಳ್ಳುವ ಪ್ರಮೇಯವೇನಾದರೂ ಬಂದಲ್ಲಿ ಈ ಲೇಖನವೇ ಮೊಟ್ಟ ಮೊದಲನೆಯದಾಗುತ್ತೆ. ಆದ್ದರಿಂದಲೇ ನನಗೆ ಪ್ರಾರಂಭದಲ್ಲಿಯೇ ಇಂತಹ ಸಮಸ್ಯೆಗಳು ಎದುರಾದದ್ದು. ನಾನು ಕೀ ಶಬ್ಧದ ಬಗ್ಗೆ ಯೋಚಿಸುತ್ತಿದ್ದೀನಿ, ಯಾವ ಅರ್ಥದಲ್ಲಿ ಆ ಹೆಸರನ್ನು ಬಳಸಬೇಕೂಂತ! ಈ ಶಬ್ಧಕ್ಕೆ ಕ್ಯಾಸಿಯಾ (ಒಂದು ಜಾತಿಯ ಗಿಡ) ಅಥವಾ ನೊಬಿಲಿಟಿ (ಯೋಗ್ಯತೆ) ಅನ್ನುವ ಅರ್ಥಗಳಿವೆ. ಅವನಿಗೆ ಮೂನ್ ಪೆವಿಲಿಯನ್ ಅಂತ ಹೆಸರು ಇದ್ದಿದ್ದರೆ, ಅಥವಾ ಮೂನ್ ಫೆಸ್ಟಿವಲ್ (ಚಂದ್ರಪರ್ವ ಅಥವಾ ಹಬ್ಬದಂದು ಕ್ಯಾಸಿಯಾ ಹೂ ಬಿಡುವುದೆಂಬುದು ಚೀನೀಯ ಜಾನಪದ ಕತೆಗಳಲ್ಲಿ ಒಂದು ನಂಬಿಕೆಯಾಗಿ ಕಾಣಿಸುತ್ತದೆ). ಇದಲ್ಲದೆ ಅವನಿಗೆ ಬೇರೆ ಹೆಸರು ಇರಲಿಲ್ಲ. ಇದ್ದರೂ ಯಾರಿಗೂ ತಿಳಿದಂತಿರಲಿಲ್ಲ. ಯಾಕೇಂದ್ರೆ ಎಂದೂ ಅವನು ಯಾರಿಗೂ ತನ್ನ ಹುಟ್ಟು ಹಬ್ಬದ ಆಹ್ವಾನವನ್ನು ಕಳಿಸಿರಲಿಲ್ಲ. ಒಂದು ವೇಳೆ ಅವನಿಗೆ ಒಬ್ಬ ಹಿರಿಯಣ್ಣನೋ, ತಮ್ಮನೋ ಇದ್ದಿದ್ದರೆ ಆಹ್ ಪ್ಯೂ ಅನ್ನೋ ಹೆಸರು ಅವರದಾಗಿದ್ದರೆ, ಇವನನ್ನು ಖಂಡಿತ ಕೀ ಅಂತ ಕರೆಯಬಹುದಾಗಿತ್ತು. ಅವನೊಬ್ಬನೇ ಇದ್ದದ್ದು. ಆದ್ದರಿಂದ ಖಂಡಿತವಾಗಿಯೂ ಯೋಗ್ಯತೆ ಅರ್ಥದಲ್ಲಿನ ಕೀ ಹೆಸರನ್ನು ಇಟ್ಟು ಸಮರ್ಥಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಕೀ ಧ್ವನಿಯ ಇನ್ನುಳಿದ ಅಪರೂಪದ ಹೆಸರುಗಳು ಮತ್ತೂ ಹೊಂದುವುದಿಲ್ಲ. ನಾನೇ ಒಮ್ಮೆ ಊರಿಗೇ ಬಹಳ ವಿದ್ಯಾವಂತನೆನಿಸಿಕೊಂಡಿದ್ದ ಚಾವೋನ ಮಗನನ್ನು ಈ ಸಮಸ್ಯೆಯ ಬಗ್ಗೆ ವಿಚಾರಿಸಿದೆ. ಆದರೆ ಅವನೂ ದಿಕ್ಕು ತೋಚದಂತೆ ಇದ್ದ. ಅವನ ಪ್ರಕಾರ ಈ ಹೆಸರಿನ ಮೂಲವನ್ನು ಗುರುತಿಸಲು ಸಾಧ್ಯವಾಗದೆ ಹೋಗಿರುವುದಕ್ಕೆ ಚೆನ್ ತು ಸಿಯು 'ನ್ಯೂ ಯೂಥ್' ಅನ್ನುವ ಪತ್ರಿಕೆಯೊಂದನ್ನು ಹೊರತಂದು ಪಾಶ್ಚಾತ್ಯ ಅಕ್ಷರಗಳನ್ನು ಬಳಸುವುದನ್ನು ಒತ್ತಿ ಹೇಳಿದ. ನಮ್ಮ ರಾಷ್ಟ್ರೀಯ ಸಂಸ್ಕೃತಿ ಹಾಳಾಗುವುದಕ್ಕೆ ಅದೇ ಕಾರಣವೆಂದು ವಿವರಿಸಿದ. ಕಡೆಯ ಪ್ರಯತ್ನವಾಗಿ ನನ್ನ ಜಿಲ್ಲೆಯ ಒಬ್ಬ ವ್ಯಕ್ತಿಯನ್ನು ಆಹ್ ಕ್ಯೂ ಗೆ ಸಂಬಂಧಿಸಿದ ಕೇಸಿನ ದಾಖಲೆ ಪತ್ರಗಳನ್ನು ನೋಡಲು ಹೇಳಿದೆ. ಆಮೇಲೆ ಎಂಟು ತಿಂಗಳ ನಂತರ ನನಗೆ ಉತ್ತರ ಬಂತು. ಆಹ್ ಕೀ (Ah Quei) ಅನ್ನುವ ಯಾವ ಹೆಸರೂ ಅವುಗಳಲ್ಲಿ ಕಾಣಿಸಲಿಲ್ಲವೆಂದು ಬರೆದಿದ್ದ. ಆದರೆ ಅವನು ತನ್ನ ಉತ್ತರದಲ್ಲಿ ನಿಜವಾದ್ದನ್ನೆ ಬರೆದಿದ್ದನೋ ಅಥವಾ ಅವನಿಗೆ ದಾಖಲೆ ಪತ್ರಗಳನ್ನು ಹುಡುಕುವುದಕ್ಕೆ

ಆಗಲಿಲ್ಲವೋ ಎನ್ನುವುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿರಲಿಲ್ಲ. ಆಗಿನ್ನೂ ಧ್ವನಿ ನಿಯಮಗಳ ಬಗ್ಗೆ ಅಷ್ಟಾಗಿ ಪರಿಚಯವಿದ್ದಂತಿರಲಿಲ್ಲ. ಬಳಕೆಯೂ ಆಗುತ್ತಿರಲಿಲ್ಲ. ಆದ್ದರಿಂದ ನನಗೆ ಉಳಿದದ್ದು ಒಂದೇ ದಾರಿ. ಇಂಗ್ಲಿಷ್ ಸ್ಪೆಲಿಂಗ್ ಪ್ರಕಾರ 'Ah Quei' ಅಂತ ಬರೆದು ಮತ್ತೆ ಅದನ್ನು ಮೊಟಕುಗೊಳಿಸಿ 'Q' ಎಂದು ಬರೆಯುವುದು 'The New Youth' ಪತ್ರಿಕೆಯ ನಿರೀಕ್ಷೆಗೆ ಇದು ಸಮನಾಗಿತ್ತು. ಇದರಿಂದ ನನಗೆ ನಾಚಿಕೆ ಅಂತ ಅನಿಸಿದರೂ, ಬಹಳ ಓದಿದ ಚಾವೋನ ಮಗನಿಗೆ ನನ್ನ ಸಮಸ್ಯೆ ಬಿಡಿಸಲು ಸಾಧ್ಯವಾಗದ ಮೇಲೆ ನನ್ನಂತಹವರು ಮಾಡುವುದಾದರೂ ಏನು?

ನಾಲ್ಕನೆ ಸಮಸ್ಯೆ ಆಹ್ ಕ್ಯೂ ನ ಹುಟ್ಟೂರು. ಅವನಿಗೆ ಚಾವೋ ಅನ್ನೋ ಹೆಸರೇ ಇದ್ದಿದ್ದರೆ, ಹಿಂದಿನ ಸಮಪ್ರದಾಯದಂತೆ ಹುಟ್ಟೂರುಗಳನ್ನು ಉಪನಾಮವಾಗಿ ಇರಿಸಿಕೊಳ್ಳುತ್ತಿದ್ದುದರಿಂದ, ಅವನು ಹುಟ್ಟಿದ್ದು ಎಲ್ಲಿಂದು ಗುರುತಿಸಬಹುದಾಗಿತ್ತು. "The hundred surnames" ಅನ್ನುವ ಗ್ರಂಥವನ್ನು ನೋಡಿ ಯಾವ ಪ್ರದೇಶಕ್ಕೆ ಸೇರಿದವನೆಂದು ಪತ್ತೆ ಹಚ್ಚುವುದು ಸಾಧ್ಯವಿತ್ತು. ಒಂದು ಉಪನಾಮ ಕಣ್ಣಿಗೆ ಬಿತ್ತಾದರೂ ಅದರ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿದ್ದವು. ಆದ್ದರಿಂದ ಅವನ ಹೆಸರಿನಷ್ಟೇ ಅವನ ಜನ್ಮ ಸ್ಥಾನವೂ ಅನಿಶ್ಚಿತವಾಗಿತ್ತು. ಸುಮಾರು ವರ್ಷಗಳು ವೀಷು ವಾಂಗ್ ಎಂಬ ಊರಿನಲ್ಲಿ ಇದ್ದರೂ ನಂತರ ಹಲವಾರು ಕಡೆ ಓಡಾಡಿದ್ದರಿಂದ, ವೀಷುವಾಂಗ್‌ನ್ನು ಅವನ ಹುಟ್ಟೂರು ಬಂದು ಹೇಳುವುದು ಸರಿಯಿರುವುದಿಲ್ಲ. ಹಾಗೇನಾದರೂ ಆದರೆ ಇತಿಹಾಸವನ್ನು ತಿರುಚಿದಂತಾಗುತ್ತದೆ.

ಕಡೆಗೆ ನನಗೆ ಸಮಾಧಾನ ಎನಿಸಿದ್ದು Ah Q. ಇದೇ ಸರಿಯಾದ್ದು ನನ್ನ ತಪ್ಪು ತರ್ಕವನ್ನು ಸಮರ್ಥಿಸುವುದಲ್ಲ. ಮುಂದೆ ಬರುವ ವಿದ್ವಾಂಸರ ಎದುರಿನಲ್ಲಿಯೂ ನಿಲ್ಲಬಲ್ಲದು ಎನಿಸಿದ್ದರಿಂದ ಇದೇ ಹೆಸರಿಗೆ ಅಂಟಿಕೊಂಡೆ. ಇನ್ನು ಮಿಕ್ಕ ವಿಷಯಗಳು ನನ್ನಂತಹ ಸಾಮಾನ್ಯ ಅವಿದ್ಯಾವಂತರಿಗೆ ಸಂಬಂಧಪಟ್ಟಿದ್ದಲ್ಲ. ಒಂದೇ ಒಂದು ಭರವಸೆ ಎಂದರೆ ಡಾಕ್ಟರ್ ಹುಷೀಹ್ ನ ಶಿಷ್ಯರು ಯಾರಾದರೂ ಪ್ರಾಚೀನ ಇತಿಹಾಸದ ಬಗ್ಗೆ ತುಂಬ ಅಭಿಮಾನ ಇರಿಸಿಕೊಂಡಿರುವವರು ಮುಂದೆ ಇದರ ಬಗ್ಗೆ ಏನಾದರೂ ಬೆಳಕು ಚೆಲ್ಲಿಯಾರು. ಆದರೆ, ಅಷ್ಟು ಹೊತ್ತಿಗೆ ಆಹ್ ಕ್ಯೂ ನ ನೈಜ ಚರಿತ್ರೆ ಎಲ್ಲಿಯೋ ಅಜ್ಞಾತದಲ್ಲಿ ಮರೆಯಾಗಿ ಹೋಗಿರಬಹುದೇನೋ ಎಂಬ ಭಯ ಮಾತ್ರ ಇದೆ. ಮುಂದಿನದನ್ನು ಪ್ರವೇಶವೆಂದು ಭಾವಿಸಬಹುದು.

# ಅಧ್ಯಾಯ - ೨

## ಆಹ್ ಕ್ಯೂ ನ ದಿಗ್ವಿಜಯಗಳ ಸಂಕ್ಷಿಪ್ತ ವಿವರ:

ಆಹ್ ಕ್ಯೂನ ಉಪನಾಮ ವೈಯಕ್ತಿಕ ನಾಮ, ಹುಟ್ಟೂರು - ಮುಂತಾದವುಗಳಿಗೆ ಸಂಬಂಧಿಸಿದಂತೆ ಹೇಗೆ ಅನಿರ್ದಿಷ್ಟತೆ ಇದೆಯೋ, ಹಾಗೆಯೇ ಅವನ ಹಿನ್ನಲೆಯೂ ಅನಿರ್ದಿಷ್ಟವಾಗಿದೆ. ವೀಷುವಾಂಗ್ ನ ಜನ ಆಹ್ ಕ್ಯೂ ನಿಂದ ಬೇಕಾದಷ್ಟು ಬಿಟ್ಟಿ ಕೆಲಸಗಳನ್ನು ಮಾಡಿಸಿಕೊಂಡರು. ಅವನನ್ನು ನಗೆಪಾಟಲಿಗೆ ಗುರಿಯಾಗಿಸಿದರು. ಆದರೆ ಯಾರೊಬ್ಬರೂ ಅವನ ಹಿನ್ನೆಲೆಯ ಬಗ್ಗೆ ಗಮನ ಕೊಡಲೇ ಇಲ್ಲ. ಆಹ್ ಕ್ಯೂ ಕೂಡಾ ಇದರ ಬಗ್ಗೆ ಅಷ್ಟಾಗಿ ಯೋಚನೆ ಮಾಡೋಕೆ ಹೋಗಲಿಲ್ಲವಾದರೂ ಯಾವಾಗಲಾದರೂ ಯಾರ ಜೊತೆಗಾದರೂ ಜಗಳ ಮಾಡುವಾಗ ಸಿಟ್ಟು ಬಂದರೆ .... "ನಾವೂ ಕೂಡ ನಿಮಗಿಂತ ಚೆನ್ನಾಗಿ ಬಾಳಿದವರೇ! ನಿನ್ನನ್ನು ನೀನು ಏನೂಂತ ತಿಳಿದುಕೊಂಡಿದ್ದೀಯ" ಎಂದು ಗದರಿಕೆಯ ದನಿಯಲ್ಲಿ ಸವಾಲೆಸೆಯುತ್ತಿದ್ದ.

ಆಹ್ ಕ್ಯೂಗೆ ಮನೆಯಾಗಲೀ, ಮನೆಯವರಾಗಲೀ ಇರಲಿಲ್ಲ. ವೀಷುವಾಂಗ್‌ನ ಗುಡಿಯೊಂದರಲ್ಲಿ ವಾಸಿಸುತ್ತಿದ್ದ. ಅವನಿಗೆ ನಿಯಮಿತವಾದ ಒಂದು ಕೆಲಸ ಇರಲಿಲ್ಲ. ಆದರೆ ಅವರಿವರಿಗೆ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಕೊಡುತ್ತಿದ್ದ. ಗೋಧಿ ಬೀಸಿಕೊಂಡು ಬರೋದು, ಅಕ್ಕಿಯಾಡಿಸಿಕೊಂಡು ಬರೋದು, ದೋಣಿ ರಿಪೇರಿ ಮಾಡೋದು, ಮುಂತಾದ ಎಲ್ಲವನ್ನೂ ಮಾಡುತ್ತಿದ್ದ. ದಿನಕ್ಕಿಂತ ಜಾಸ್ತಿ ವೇಳೆ ಆಗುವುದಾದರೆ ಆಯಾ ಮನೆಯಲ್ಲಿಯೇ ಇದ್ದು ಬಿಡುತ್ತಿದ್ದ. ಕೆಲಸ ಮುಗಿದ ಮೇಲೆ ಹೊರಟು ಹೋಗುತ್ತಿದ್ದ. ಏನಾದರೂ ಕೆಲಸ ಆಗಬೇಕಿದ್ದರೆ, ಜನ ತಕ್ಷಣ ಆಹ್ ಕ್ಯೂ ನನ್ನು ನೆನಪಿಸಿಕೊಳ್ತಿದ್ದರೆ ಹೊರತಾಗಿ ಅವನ ಬಗ್ಗೆ ಅವನ ಪರಿಸ್ಥಿತಿ ಬಗ್ಗೆ ಯಾರಿಗೂ ಯೋಚನೇನೆ ಬರುತ್ತಿರಲಿಲ್ಲ. ಕೆಲಸ ಮುಗೀತಿದ್ದಂಗೆ ಜನಕ್ಕೆ ಆಹ್ ಕ್ಯೂನ ನೆನಪೂ ಕೂಡಾ ಉಳಿಯುತ್ತಿರಲಿಲ್ಲ. ಹೀಗಿರುವಾಗ ಅವನ ಹಿನ್ನೆಲೆ ಯಾರಿಗೆ ಬೇಕಿತ್ತು! ಒಂದು ಸಲ ಒಬ್ಬ ವಯಸ್ಸಾದ ವ್ಯಕ್ತಿ "ಆಹಾ! ಆಹ್ ಕ್ಯೂ ಎಂಥ ಒಳ್ಳೆ ಕೆಲಸಗಾರ!" ಎಂದ. ಆಗ ಅಲ್ಲಿಯೇ ನಿಂತಿದ್ದ ಆಹ್ ಕ್ಯೂ ಸೊಂಟ ಕುಲುಕುತ್ತ ಅವನ ಮುಂದೆ ನಿಂತ. ಅಲ್ಲಿದ್ದ ಜನಕ್ಕೆ ಮುದುಕ ಆಹ್ ಕ್ಯೂನ ಬಗ್ಗೆ ನಿಜವಾಗಿಯೂ ಮೆಚ್ಚುಗೆಯಿಂದ ಹೇಳಿದನೋ ಅಥವಾ ವ್ಯಂಗ್ಯವೋ ತಿಳಿಯುವುದಕ್ಕೆ ಆಗದೆ ಹೋದರೂ ಆಹ್ ಕ್ಯೂಗಂತೂ ಎಲ್ಲಿಲ್ಲದ ಖುಷಿ ಅನ್ನಿಸಿತು.

ಆಹ್ ಕ್ಯೂಗೆ ತನ್ನ ಬಗ್ಗೆ ಬಹಳ ಹೆಮ್ಮೆ ಎನಿಸುತ್ತಿತ್ತು. ಎಲ್ಲರನ್ನೂ ಅವನು ತನಗಿಂತ ಕಡಿಮೆ ಎನ್ನುವ ಹಾಗೆ ನೋಡುತ್ತಿದ್ದ. ವೀಷುವಾಂಗ್‌ನ ಇಬ್ಬರು ಯುವ ವಿದ್ವಾಂಸರನ್ನೂ ಅವನ ಲೆಕ್ಕಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಅಫಿಷಿಯಲ್ ಪರೀಕ್ಷೆಗಳಲ್ಲಿ ಸಾಮನ್ಯವಾಗಿ ಯಾರೂ ಪಾಸಾಗುವುದೇ ಕಷ್ಟವಾಗಿದ್ದಾಗ, ಪಾಸಾಗಿದ್ದ ಆ ಇಬ್ಬರು ಯುವಕರೂ ಇವನ ದೃಷ್ಟಿಯಲ್ಲಿ ದೊಡ್ಡವರೆನಿಸಲಿಲ್ಲ. ಮಿಸ್ಟರ್ ಚಾವೋ ಮತ್ತು ಚಿಯನ್‌ರನ್ನು ಕಂಡರೆ ಊರಿನ ಜನರೆಲ್ಲ ಅವರ ಶ್ರೀಮಂತಿಕೆಗಾಗಿ ಮತ್ತು ವಿದ್ಯಾವಂತ ಮಕ್ಕಳ ತಂದೆಯರಾಗಿದ್ದುದಕ್ಕಾಗಿ ತುಂಬ ಗೌರವದಿಂದ ನಡೆದುಕೊಳ್ಳುತ್ತಿದ್ದರು. ಆದರೆ ಆಹ್‌ಕ್ಯೂಗೆ ಇದೆಲ್ಲ ಏನೂ ದೊಡ್ಡದೆನಿಸಲಿಲ್ಲ. ನನ್ನ ಮಕ್ಕಳು ಇವರ ಮಕ್ಕಳಿಗಿಂತ ದೊಡ್ಡವರಾಗಬಹುದು!- ಎಂದು ಯೋಚಿಸುತ್ತಿದ್ದ.

ಪಟ್ಟಣಕ್ಕೆ ಹೋಗಿ ಬಂದ ಮೇಲಂತೂ ಅವನ ದರ್ಪ ಇನ್ನೂ ಹೆಚ್ಚಾಗಿ ಹೋಗಿತ್ತು. ಹಾಗಂತ ಪಟ್ಟಣದ ಜನರ ಬಗ್ಗೆ ಅಷ್ಟು ಒಳ್ಳೆ ಅಭಿಪ್ರಾಯ ಏನೂ ಇಟ್ಟುಕೊಂಡಿರಲಿಲ್ಲ. ಉದಾಹರಣೆಗೆ ಹೇಳೋದಾದ್ರೆ ೩ x ೩ ಅಂಗುಲದ ಮರದ ಹಲಗೆಯನ್ನು ವೀಷುವಾಂಗ್ ಜನ ಉದ್ದನೆಯ ಬೆಂಚ್ ಅಂತ ಕರೆಯುತ್ತಿದ್ದರು. ಆಹ್ ಕ್ಯೂ ನೂ ಸಹ ಅದನ್ನು ಹಾಗೇ ಕರೀತಿದ್ದ. ಆದರೆ ಪಟ್ಟಣದವರು ಅದನ್ನು ನೇರ ಬೆಂಚ್ ಎಂದು ಕರೆಯುವುದನ್ನು ಒಪ್ಪುತ್ತಿರಲಿಲ್ಲ. ಎಷ್ಟು ದರಿದ್ರವಾಗಿದೆ ಆ ಹೆಸರು! - ಎಂದುಕೊಳ್ಳುತ್ತಿದ್ದ. ಅಲ್ಲದೆ ದೊಡ್ಡ ತಲೆಯ ಮೀನನ್ನು ಚೆನ್ನಾಗಿ ಹುರಿದು ಅದಕ್ಕೆ ಅರ್ಧ ಅಂಗುಲದಳತೆಗೆ ಕತ್ತರಿಸಿದ ಈರುಳ್ಳಿ ಜಾತಿಯ ಗಿಡದ ಎಲೆಗಳನ್ನು ಹಾಕುತ್ತಿದ್ದರೆ, ಪಟ್ಟಣದವರು ಎಳೆಎಳೆಯಾಗಿ ಕತ್ತರಿಸಿದ ಎಲೆಗಳನ್ನು ಹಾಕುತ್ತಿದ್ದುದನ್ನು ಸರಿಯಲ್ಲವೆಂದು, ಕೆಟ್ಟದಾಗಿದೆಯೆಂದೂ ಬೈಯ್ಯುತ್ತಿದ್ದ. ವೀಷುವಾಂಗ್ ಜನಕ್ಕೆ ಪಟ್ಟಣದಲ್ಲಿ ಮೀನನ್ನು ಹೇಗೆ ಹುರಿದಿರುತ್ತಾರೆ ಅನ್ನೋದೂ ಗೊತ್ತಿರಲಿಲ್ಲ!

ಆಹ್‌ಕ್ಯೂ ಒಂದು ರಈತಿಯಿಂದ ಎಲ್ಲರಿಗಿಂತ ಮೇಲಾಗಿದ್ದ. ಪ್ರಪಂಚಾನ ನೋಡಿದವ ಒಳ್ಳೆಯ ಕೆಲಸಗಾರ. ಜೊತೆಗೆ ಒಂದೆರಡು ದೈಹಿಕ ದೌರ್ಬಲ್ಯಗಳನ್ನು ಬಿಟ್ಟರೆ, ಪರಿಪೂರ್ಣ ಮನುಷ್ಯನಾಗಿದ್ದ. ಅವನಲ್ಲಿ ಜಿಗುಪ್ಸೆ ಹುಟ್ಟಿಸುವಂತಹ ಜಾಗಗಳೆಂದರೆ ತಲೆ ಮೇಲೆ, ಹಿಂದೆ ಯಾವಾಗಲೋ ಆಗಿದ್ದ ಹುಳುಕಡ್ಡಿ ಗುರುತುಗಳು! ಅಥವಾ ಕಲೆಗಳು!! ಕಲೆಗಳು ಇದ್ದದ್ದು ತನ್ನ ತಲೆ ಮೇಲೇ ಆದರೂ ಅದನ್ನು ನೆನಪಿಸುವಂತಹ ಯಾವುದನ್ನಾಗಲೀ ಯಾವ ಶಬ್ಧವನ್ನಾಗಲೀ ಕೇಳಲು ಇಷ್ಟ ಪಡುತ್ತಿರಲಿಲ್ಲ. ಆಮೇಲೆ bright, light ಶಬ್ಧಗಳೂ ನಿಷಿದ್ಧವಾದವು. ಮುಂದೆ

ಇವುಗಳ ಜೊತೆ lamp, candle ಗಳೂ ಕೂಡಾ ಸೇರಿದವು! ಯಾವಾಗಲಾದರೂ ಈ ನಿಷಿದ್ಧ ಪದಗಳು ಉದ್ದೇಶ ಪೂರ್ವಕವಾಗಿಯೋ, ಅನುದ್ದೇಶ ಪೂರ್ವಕವಾಗಿಯೋ ನಿಷೇಧವನ್ನು ಮರೆತು ಕಾಣಿಸಿಕೊಂಡರೆ, ಆಹ್ ಕ್ಯೂ ಸಿಡಿಮಿಡಿಗೊಂಡು ಎಗರಾಡುತ್ತಿದ್ದ. ಇದರಿಂದ ಅವನ ಹುಳಕಡ್ಡಿ ಕಲೆಗಳು ಇನ್ನಷ್ಟು ಬಣ್ಣ ಪಡೆಯುತ್ತಿದ್ದವು. ತಪ್ಪು ಮಾಡಿದವನೇನಾದರೂ ತನಗಿಂತ ದುರ್ಬಲನಾಗಿದ್ದರೆ ಬೈದು ಶಾಪ ಹಾಕುತ್ತಿದ್ದ. ತಿರುಗಿ ಜಗಳ ಆಡಲು ಅಸಮರ್ಥನಾದವನೇನಾದರೂ ಇದ್ದರೆ ಅವನನ್ನು ಹೊಡೆದೇ ಬಿಡುತ್ತಿದ್ದ. ಆದರೆ ತಮಾಷೆ ಏನೂಂದರೆ, ಪ್ರತಿ ಸಂದರ್ಭದಲ್ಲೂ ಸೋಲುತ್ತಿದ್ದವನು ಆಹ್‌ಕ್ಯೂನೇ ಆಗಿರುತ್ತಿದ್ದ! ಹಾಗಾಗಿ ಅವನು ಕಡೆಗೆ ತನ್ನ ವಿರೋಧಿಗಳನ್ನು ದುರುಗುಟ್ಟಿ ನೋಡುವುದರೊಂದಿಗೆ ಸಮಾಧಾನ ತಂದುಕೊಳ್ಳುತ್ತಿದ್ದ.

ಇದರಿಂದ, ವೀಷುವಾಂಗ್‌ನ ಸೋಮಾರಿಗಳು, ಅವನು ಹೊಡೆಯುವುದಿಲ್ಲಾಂತ ಗೊತ್ತಾದಂದಿನಿಂದ ಇನ್ನಷ್ಟು ಅವನನ್ನು ಕೀಟಲೆಮಾಡಲು ತೊಡಗಿದರು. ಅವನನ್ನು ನೋಡುತ್ತಿದ್ದ ಹಾಗೆ, "ನೋಡು ನೋಡು ಹತ್ತಿಕೊಳ್ಳುತ್ತಿದೆ"(lighting up) ಅಂತ ಹೇಳಿ ಓಡಿ ಹೋಗುತ್ತಿದ್ದರು.

ಆಹ್ ಕ್ಯೂ ಮಾಮೂಲಿನಂತೆ ಅವರತ್ತ ಕೋಪದಿಂದ ನೋಡುತ್ತಿದ್ದ.

ಓಹೋ ಪ್ಯಾರಾಫಿನ್ ಲ್ಯಾಂಪ್ ಇಲ್ಲಿದೆ! ಎಂದು ಕೀಟಲೆ ಮುಂದುವರೆಸುತ್ತಿದ್ದರು.

ತಲೆ ಕೆರೆದುಕೊಂಡು ಇನ್ನೇನಾದರೂ ಬೇರೆ ವಿಧಾನವಿದೆಯೇ ಎಂದು ಯೋಚಿಸವುದನ್ನು ಬಿಟ್ಟರೆ ಆಹ್ ಕ್ಯೂಗೆ ಏನೂ ಮಾಡಲಾಗುತ್ತಿರಲಿಲ್ಲ. "ನಿಮಗೆ... ನಿಮಗೆ ಏನು ಮಾಡಿದರೂ...." ಎಂದು ಏನೋ ಹೇಳಲು ಯತ್ನಿಸುತ್ತಿದ್ದಂತೆ, ಅವನು ತನ್ನ ತಲೆಮೇಲಿನ ಕಲೆಗಳ ಬಗ್ಗೆ, "ಇವು ಸಾಮಾನ್ಯ ಕಲೆಗಳಲ್ಲ. ಈ ಕಲೆಗಳಿಗೆ ದೊಡ್ಡತನವಿದೆ; ಶ್ರೇಷ್ಠತೆಯಿದೆ." ಎಂದು ಹೆಮ್ಮೆಯಿಂದ ಬೀಗಿಕೊಳ್ಳಲು ಆರಂಭಿಸಿದ. ಆಹ್ ಕ್ಯೂ ವ್ಯವಹಾರ ಜ್ಞಾನವಿದ್ದವನು. ಅವನಿಗೂ ಗೊತ್ತು, ತಾನೇ ಎಲ್ಲ ನಿಯಮಗಳನ್ನೂ ಮುರಿದಿದ್ದೇನೆ ಎಂದು. ಅದಕ್ಕೆ ಏನೂ ಹೇಳೋದನ್ನೇ ನಿಲ್ಲಿಸಿಬಿಟ್ಟ.

ಸೋಮಾರಿಗಳಿಗೆ ಇದರಿಂದ ಇನ್ನೂ ಸಮಾಧಾನ ಆಗದೆ, ಅವನನ್ನು ರೇಗಿಸುವುದನ್ನು ಮುಂದುವರೆಸಿದರು. ಗುದ್ದಾಟಕ್ಕೆ ನಿಲ್ಲುತ್ತಿದ್ದರು. ಆಹ್‌ಕ್ಯೂನನ್ನು ಸೋಲಿಸಿ, ಅವನ ಪಿಗ್ ಟೈಲ್ ಹಿಡಿದು ನಾಲ್ಕೈದು ಬಾರಿ ಗೋಡೆಗೆ ದಟ್ಟಿಸಿ ತಾವು

ಗೆದ್ದೆವೆಂಬ ಭಾವದೊಂದಿಗೆ ಹೊರಟು ಹೋಗುತ್ತಿದ್ದರು. ಆಹ್ ಕ್ಯೂ ಒಂದು ಕ್ಷಣ ಅಲ್ಲಿಯೇ ನಿಂತು, "ನನ್ನ ಮಗನಿಂದಲೇ ನಾನು ಹೊಡೆಸಿಕೊಂಡಂತಿದೆ" ಎಂದು ತನ್ನೊಳಗೇ ಹೇಳಿಕೊಳ್ಳುತ್ತಿದ್ದ. ಪ್ರಪಂಚ ಇತ್ತೀಚಿನ ದಿನಗಳಲ್ಲಿ ಏನಾಗಿ ಹೋಗ್ತಿದೆ!... ನಂತರ ತಾನೂ ಗೆದ್ದೆನೆಂಬ ತೃಪ್ತಿಯ ಭಾವದೊಂದಿಗೆ ಹೊರಡುತ್ತಿದ್ದ.

ಆಹ್‌ಕ್ಯೂ ಏನೇ ಮಾಡಲಿ, ನಂತರ ಜನರಿಗೆ ಅದನ್ನು ಹೇಳುತ್ತಿದ್ದ. ಇದರಿಂದಾಗಿ ಅವನನ್ನು ಗೇಲಿ ಮಾಡಿದವರೆಲ್ಲರಿಗೂ, ಆಹ್ ಕ್ಯೂನ ಈ ರೀತಿ ಮಾನಸಿಕ ಗೆಲುವು ಪಡೆದದ್ದನ್ನು ಸೂಚಿಸುವುದಕ್ಕಾಗಿ, ಎಂಬ ಸತ್ಯ ತಿಳಿದಿತ್ತು. ಇದಾದ ಮೇಲೆ ಯಾರಾದರೂ ಅವನ ಪಿಗ್‌ಟೈಲ್ ಮಾದರಿಯ ಜುಟ್ಟನ್ನು ಎಳೆದರೆ, ತಿರುಚಿದರೆ ಅವನನ್ನು ಅಡ್ಡಗಟ್ಟಿ ಹೇಳುತ್ತಿದ್ದರು-"ಆಹ್‌ಕ್ಯೂ, ಇದು ಮಗ ತಂದೇನ ಹೊಡೆಯೋ ರೀತಿಯಲ್ಲ; ಒಂದು ಪಶುನ ಹೊಡೆಯೋ ರೀತಿ" ಎಂದು. "ಎಲ್ಲಿ ಹೇಳು, ನೋಡೋಣ, ಮನುಷ್ಯ ಪಶುವನ್ನು ಹೊಡಿಯೋದು!"

ಆಗ ಆಹ್‌ಕ್ಯೂ ತನ್ನ ಜುಟ್ಟಿನ ಬುಡವನ್ನು ಗಟ್ಟಿಯಾಗಿ ಹಿಡಿದು, ತಲೆ ಒಂದು ಕಡೆ ತಿರುಗಿಸಿ, ಒಂದು ಕೀಟವನ್ನು ಹೊಡೆಯೋದು! - ಅಂದ್ರೆ ಹೇಗಿರುತ್ತೇ?! ನಾನು ಈಗ ಒಂದು ಕೀಟ. ಈಗ ನನ್ನನ್ನು ಹೋಗೋಕೆ ಬಿಡ್ತೀರಾ?

ಅವನು ಕೀಟವೇ ಅಗಿದ್ದರೂ ಸೋಮಾರಿಗಳು ಒಂದು ಐದಾರು ಬಾರಿಯಾದರೂ ಆಹ್‌ಕ್ಯೂನ ತಲೆಯನ್ನು ಹತ್ತಿರವಿರುವ ಯಾವುದಾದರೂ ವಸ್ತುವಿಗೆ ಘಟ್ಟಿಸದ ಹೊರತು ಬಿಡುತ್ತಿರಲಿಲ್ಲ. ಹಾಗೆ ಮಾಡಿದ ಮೇಲೆ ಮಾಮೂಲಿನಂತೆ, ತಾವು ಗೆದ್ದೆವೆಂಬ ಭಾವದೊಂದಿಗೆ ಹಿಂದಿರುಗಿ ಹೋಗುತ್ತಿದ್ದರು, ಆಹ್ ಕ್ಯೂನನ್ನು ಮುಗಿಸಿ ಬಿಟ್ಟೆವೆಂಬ ತೃಪ್ತಿಯೊಂದಿಗೆ! ನಂತರ ಅವರು ಹೋದ ಹತ್ತು ನಿಮಿಷಕ್ಕೂ ಮೊದಲೇ ಆಹ್‌ಕ್ಯೂ ಕೂಡಾ ಗೆದ್ದ ತೃಪ್ತಿಯೊಂದಿಗೆ ಹೊರಟು ಬಿಡುತ್ತಿದ್ದ. ಆದರೆ ಜೊತೆಗೆ 'ಎಲ್ಲರಿಗಿಂತ ಕೀಳರಿಮೆ ಮನುಷ್ಯರಲ್ಲಿ ತಾನೇ ಮುಂದು' ಎಂದು ಯೋಚಿಸುತ್ತಿದ್ದ. ಇದರಲ್ಲಿ ಅಂದರೆ ಈ ವಾಕ್ಯದಲ್ಲಿ ಎಲ್ಲರಿಗಿಂತ ಮುಂದು ಅನ್ನುವುದನ್ನು ಉಳಿಸಿಕೊಂಡು ಕೀಳರಿಮೆ ಅನ್ನುವುದನ್ನು ತೆಗೆದು ಬಿಟ್ಟರೆ, 'ಎಲ್ಲರಿಗಿಂತ ಮನುಷ್ಯರಲ್ಲಿ ಮುಂದು'- ಮಾತ್ರ ಉಳಿಯುತ್ತದೆ. ಅಫಿಷಿಯಲ್ ಪರೀಕ್ಷೆಯಲ್ಲಿ ಪಾಸಾದವನೂ ಕೂಡಾ ಎಲ್ಲರಿಗಿಂತ ಮನುಷ್ಯರಲ್ಲಿ ಮುಂದು- ಹೌದು ತಾನೆ? "ಅಂದಮೇಲೆ ನೀನು ನಿನ್ನನ್ನು ಏನೆಂದುಕೊಂಡಿದ್ದಿ?

ಇಂತಹ ಜಾಣ ಉಪಯಗಳನ್ನು ಬಳಸಿ ತನ್ನ ವಿರೋಧಿಗಳೊಂದಿಗೆ ಹೇಗೋ ನಿಭಾಯಿಸುತ್ತಿದ್ದ. ಆಹ್ ಕ್ಯೂ ಹೆಂಡದಂಗಡಿಗೆ ಹೋಗಿ, ಒಂದೆರಡು ಬಟ್ಟಲು ಹೆಂಡ ಕುಡಿದು ತನ್ನ ಜೋಕುಗಳಿಂದ ಎಲ್ಲರನ್ನು ನಗಿಸುತ್ತ, ಕೆಲವರೊಂದಿಗೆ ಜಗಳ ಮಾಡುತ್ತ, ಗೆದ್ದೆನೆಂಬ ಭಾವದೊಂದಿಗೆ ಹೊರಟು ಅವನ ರಕ್ಷಕ ದೇವರ ಗುಡಿಗೆ ಮರಳಿ, ದಿಂಬಿಗೆ ತಲೆ ಕೊಟ್ಟಿದ್ದೇ, ನಿದ್ದೆಗೆ ಇಳಿದು ಬಿಡುತ್ತಿದ್ದ. ಅವನ ಹತ್ತಿರ ದುಡ್ಡು ಗಿಡ್ಡು ಇದ್ದರೆ ಜೂಜಾಡುತ್ತಿದ್ದ. ಒಂದಷ್ಟು ಜನ ಗುಂಪಾಗಿ ಕುಳಿತರೆ ಆಹ್ ಕ್ಯೂ ಅವರ ಮಧ್ಯೆ ಹೇಗೋ ಸೇರಿಕೊಂಡು ಬಿಡುತ್ತಿದ್ದ. ಅವನ ಮುಖ ಬೆವರಿನ ಮುದ್ದೆಯಾಗಿರುತ್ತಿತ್ತು. ಎಲ್ಲರಿಗಿಂತ ಗಟ್ಟಿ ದನಿಯಲ್ಲಿ "ಹಸಿರು ಡ್ರ್ಯಾಗನ್ ಮೇಲೆ ನಾಲ್ಕುನೂರು!" ಎಂದು ಕಿರುಚುತ್ತಿದ್ದ. ಹೇ! ಅಲ್ಲಿ ಓಪೆನ್! ಪಣಧಾರಿ. ಬೆವರು ಸುರಿಸುತ್ತಾ ಕಿರುಚುತ್ತಿದ್ದ. ಪೆಟ್ಟಿಗೆ ತೆಗೆದು ದೇವರೇ ಎಂದು ಗುಣುಗುಣಿಸುತ್ತಿದ್ದ. ಕಾರ್ನರ್‌ಗೆ ಏನೂ ಇಲ್ಲ. ಇದಕ್ಕೆ ಬಾಜಿ ಕೂಡದು! ಆಹ್‌ಕ್ಯೂನ ಆ ನಾಣ್ಯಗಳ್ನು ಇತ್ತ ತಳ್ಳು. ಪ್ಯಾಸೇಜ್ ಒಂದುನೂರು... ಒಂದು ನೂರೈವತ್ತು"..... ಬಾಜಿ ಲೆಕ್ಕ ಹೀಗೆ ಸಾಗುತ್ತಿದ್ದಂತೆ ಆಹ್‌ಕ್ಯೂನ ಹಣ ಮೆಲ್ಲಗೆ ಜಾರಿ ಎದುರಾಳಿಗಳ ಜೇಬು ಸೇರುತ್ತಿತ್ತು. ನಂತರ ಅವನು ಅಲ್ಲಿಂದ ಮೆಲ್ಲಗೆ ಎದ್ದು ಆಟಗಾರರ ಬೆನ್ನಿಗೆ ನಿಂತು ಬಹಳ ಕುತೂಹಲದಿಂದ ಆಟ ನೋಡುತ್ತಿದ್ದ. ತನ್ನ ರಕ್ಷಕ ದೇವರ ಗುಡಿಗೆ ಒಲ್ಲದ ಮನಸ್ಸಿನಿಂದ ಹಿಂತಿರುಗುತ್ತಿದ್ದ. ಮಾರನೆ ದಿನ ಊದಿದ ಕಣ್ಣುಗಳಿಂದ ಕೆಲಸಕ್ಕೆ ಹೋಗುತ್ತಿದ್ದ.

ಒಂದು ಗಾದೆಯಿದೆ. ದುರದೃಷ್ಟ ಒಂದು ರೀತಿಯಲ್ಲಿ ವರವಾಗಿದೆ, ಅಂತ. ಆಹ್‌ಕ್ಯೂನ ಬದುಕಿನಲ್ಲಿ ಇದು ಅಕ್ಷರಶಃ ಸತ್ಯವಾಗಿತ್ತು. ಆಹ್‌ಕ್ಯೂನ ದುರಾದೃಷ್ಟ ಅವನನ್ನು ಎಂದೂ ಗೆಲ್ಲಲು ಬಿಡಲಿಲ್ಲ; ಯಾವಾಗಲೂ ಕಷ್ಟ ಅನುಭವಿಸಿದ.

ಈ ದಿನ ಸಂಜೆ ವೀಷುವಾಂಗ್‌ನಲ್ಲಿ ದೇವತೆಗಳ ಉತ್ಸವ ಇತ್ತು. ಸಂಪ್ರದಾಯದ ಪ್ರಕಾರ ಆ ದಿನ ನಾಟಕವೂ ಇತ್ತು. ಜೊತೆಗೆ ಸ್ಟೇಜ್‌ಗೆ ಆನಿಕೊಂಡಂತೆ ಜೂಜಿನ ಮೇಜುಗಳೂ ಇದ್ದವು. ಅಲ್ಲಿಂದ ಮೂರು ಮೈಲಿ ದೂರದಲ್ಲಿದ್ದ ಆಹ್‌ಕ್ಯೂನ ಕಿವಿಗೆ ಜಾತ್ರೆಯ ಗಂಟೆ, ಜಾಗಟೆಗಳ ಸದ್ದು ತಾಕಿತು. ಸಾಮಾನ್ಯವಾಗಿ ಜೂಜುಗಾರರ ಪಣದ ಘೋಷಣೆ ದನಿ ಹೊರತು ಆಹ್‌ಕ್ಯೂನ ಕಿವಿಗೆ ಏನೂ ತಲುಪುತ್ತಿರಲಿಲ್ಲ. ಮೇಲಿಂದ ಮೇಲೆ ಪಣ ಒಡ್ಡುತ್ತ ಬಂದ. ತಾಮ್ರವೆಲ್ಲ ಬೆಳ್ಳಿಯಾಗ ತೊಡಗಿತ್ತು. ಬೆಳ್ಳಿ ಮತ್ತೆ ಡಾಲರುಗಳಾಗಿ ಪರಿವರ್ತಿತವಾಗಿ, ಈ ಡಾಲರುಗಳ ಸಂಖ್ಯೆ ಸಾಕಷ್ಟು ಬೆಳೆದು ಬಿಡ್ತು.

ಎಷ್ಟೊಂದು ಭಾವಾವಿಷ್ಟನಾದನೆಂದರೆ, ದೇವರ ನೆಲೆಗೆ ಎರಡು ಡಾಲರ್! ಎಂದು ಕಿರುಚಿದ.

ಯಾರು ಜಗಳ ಶುರುಮಾಡಿದ್ದರೋ, ಅವನಿಗೆ ಅದು ಗೊತ್ತಿರಲಿಲ್ಲ, ಯಾವ ಕಾರಣಕ್ಕೆ ಅನ್ನೋದೂ ಗೊತ್ತಿರಲಿಲ್ಲ. ಶಾಪದ ಬೈಗಳು, ಗುದ್ದುಗಳು, ಹೆಜ್ಜೆ ಸಪ್ಪಳ, ಅವನ ತಲೆ ಚಿಟ್ಟು ಹಿಡಿದಂತೆ ಎನಿಸಿತು. ಸಾವರಿಸಿಕೊಂಡು ಜೂಜಿನ ಮೇಜುಗಳ ಹತ್ತಿರ ಬರುವಷ್ಟರಲ್ಲಿ, ಮೇಜುಗಳು ಮಾಯವಾಗಿದ್ದವು. ಜೂಜಾಡುವವರೂ ಅದೃಶ್ಯರಾಗಿದ್ದರು. ಅವನ ಮೈಕೈಯೆಲ್ಲಾ ನೋಯುತ್ತಿತ್ತು. ಯಾರ್‍ಯಾರಿಂದಲೋ ಒದೆ ತಿನ್ನುತ್ತಾ ಇದ್ದರೆ, ಜನ ನಿಂತು ತಮಾಶೆ ನೋಡುತ್ತಿದ್ದಂತೆನಿಸಿತು. ಎಲ್ಲೋ ಏನೋ ತಪ್ಪಾಗಿದೆ ಅಂತ ಅನಿಸಿ ತನ್ನ ರಕ್ಷಕ ದೇವರ ಗುಡಿಗೆ ಮರಳಿ ಬಂದ. ಸ್ವಲ್ಪ ಸಮಾಧಾನಕ್ಕೆ ಬಂದಂತಾಗಿ ನೋಡಿದರೆ ಅವನು ಅವಿತಿಟ್ಟಿದ್ದ ಡಾಲರ್ ರಾಶೀನೇ ಮಂಗಮಾಯ! ಆ ಜಾತ್ರೆ ಸಮಯದಲ್ಲಿ ಜೂಜಿನ ಮೇಜುಗಳಲ್ಲಿದ್ದವರು ವೀಷುವಾಂಗ್ ಜನರಲ್ಲ. ಇನ್ನು ಹೇಗೆ ತಾನೇ ಅಪರಾಧಿಗಳನ್ನು ಪತ್ತೆ ಹಚ್ಚುವುದು?

ಎಷ್ಟು ಬೆಳ್ಳಗೆ ಫಳಫಳ ಹೊಳೆಯುವ ಬೆಳ್ಳಿ ರಾಶಿ!.... ಎಲ್ಲ ಅವನದೇ ಆಗಿತ್ತು.... ಆದರೆ ಈಗ ಎಲ್ಲ ಅದೃಶ್ಯವಾಗಿದೆ. ತನ್ನ ಮಗನೇ ಕದ್ದಿರಬಹುದೆಂದು ಅಂದುಕೊಂಡರೂ ಅವನಿಗೆ ಸಮಾಧಾನ ಸಾಧ್ಯವಿರಲಿಲ್ಲ. ತಾನೊಂದು ಬರೀ ಕೀಟವೆಂದು ಭಾವಿಸಿಕೊಂಡರೂ ಸಮಾಧಾನವಾಗಲಿಲ್ಲ. ಈ ಸಲ ಮಾತ್ರ ಅವನು ತನ್ನ ಸೋಲಿನ ಕಹಿಯನ್ನು ಅನುಭವಿಸಿದ. ಆದರೆ ಸದ್ಯಕ್ಕೆ ಸೋಲನ್ನು ಗೆಲುವಾಗಿ ಪರಿವರ್ತಿಸಿದ. ಬಲಗೈಯನ್ನು ಎತ್ತಿ ತಾನೇ ತನ್ನ ಮುಖದ ಮೇಲೆ, ತೀಕ್ಷ್ಣ ನೋವಿನ ಅನುಭವ ಆಗುವ ಹಾಗೆ ಎರಡು ಬಾರಿ ಹೊಡೆದುಕೊಂಡ. ಹೀಗೆ ಹೊಡೆದುಕೊಂಡ ಮೇಲೇ ಅವನಿಗೆ ಎದೆಭಾರ ಕಡಿಮೆಯಾದಂತೆನಿಸಿತು. ಯಾಕೇಂದ್ರೆ ಹೊಡೆದವನು ತಾನೇ ಆಗಿದ್ದ!.... ಅವನ ಮುಖ ಇನ್ನೂ ನೋಯುತ್ತಿದ್ದರೂ, ತಾನು ಬೇರೆ ಯಾರಿಗೋ ಹೊಡೆದಂತೆ ಭಾವಿಸಿ ಸಮಾಧಾನ ಪಟ್ಟ. ತೃಪ್ತಿಯಿಂದ ತಾನು ಗೆದ್ದಂತೆ ಅನುಭವಿಸುತ್ತ ನೆಲದ ಮೇಲೆ ಮೈ ಚಾಚಿದ. ಸ್ವಲ್ಪ ಹೊತ್ತಿನಲ್ಲಿ ನಿದ್ದೆಗೆ ಜಾರಿದ.

## ಅಧ್ಯಾಯ - ೩

## ಇನ್ನಷ್ಟು, ಆಹ್‌ಕ್ಯೂನ ದಿಗ್ವಿಜಯಗಳ ವಿವರ

ಆಹ್‌ಕ್ಯೂ ದಿಗ್ವಿಜಯಗಳನ್ನು ಸಾಧಿಸುತ್ತ ಹೋದರೂ, ಚಾವೋ ಅವನ ಮುಖದ ಮೇಲೆ ಒಂದು ಹೊಡೆಯುವ ತನಕ ಆಹ್‌ಕ್ಯೂಗೆ ಖ್ಯಾತಿ ಸಿಕ್ಕಿರಲಿಲ್ಲ.

ದಂಡಾಧಿಕಾರಿಗೆ ಇನ್ನೂರನ್ನು ನಗದು ರೂಪದಲ್ಲಿ ಸಲ್ಲಿಸಿದ ಮೇಲೆ ಸಿಟ್ಟಿನಿಂದ ಬಿದ್ದುಕೊಂಡ. ನಂತರ ತನ್ನೊಳಗೇ ಗುನುಗುನಿಸಿದ - "ಏನಾಗಿದೆ ಈ ಪ್ರಪಂಚಕ್ಕೆ! ಮಕ್ಕಳು ತಂದೇನ ಹೊಡೆಯುವ ಸ್ಥಿತಿಗೆ ಬಂದುಬಿಟ್ಟಿದೆ ಕಾಲ!! ನಂತರ ಚಾವೋನ ಪ್ರತಿಷ್ಠೆಯ ವಿಚಾರ, ಅದೂ ಈಗ ಅವನು ತನ್ನ ಮಗನಾಗಿರುವಾಗ, ಅವನಲ್ಲಿ ಉತ್ಸಾಹವನ್ನು ತುಂಬಿತು. ಹಾಡುತ್ತ ಹೆಂಡದಂಗಡಿಯ ಕಡೆ ನಡೆದ. "ಯಾವ ವಿಧವೆ ತನ್ನ ಗಂಡನ ಗೋರಿಯ ಬಳಿಯಲ್ಲಿ" ಎಂದು ಹಾಡತೊಡಗಿದ. ಆ ಕ್ಷಣಕ್ಕೆ, ಅವನ ಮನಸ್ಸಿನಲ್ಲಿ, ಚಾವೋ ಎಲ್ಲರಿಗಿಂತ ಪ್ರತಿಷ್ಠೆಯುಳ್ಳವ ಎನ್ನುವ ಭಾವನೆ ಮೂಡಿತು.

ಬಹಳ ವಿಚಿತ್ರ ಎನಿಸಬಹುದು. ಆದರೆ ಈ ಘಟನೆ ಆದ ಮೇಲೆ ಅದೇನೋ ಜನ ಇವನಿಗೆ ಊಹಿಸಲಾಗದ ರೀತಿಯಲ್ಲಿ ಗೌರವ ಕೊಡತೊಡಗಿದರು. ಬಹುಶಃ ತಾನು ಚಾವೋನ ತಂದೆ ಅಂತ ಹೇಳಿಕೊಂಡಿದ್ದರಿಂದ ಈ ಗೌರವ ಇರಬಹುದು ಎಂದು ಭಾವಿಸಿದ. ಆದರೆ ವಾಸ್ತವವಾಗಿ ಕಾರಣ ಅದಾಗಿರಲಿಲ್ಲ. ವೀಷುವಾಂಗ್‌ನಲ್ಲಿ ನಿಯಮದಂತೆ, ಏಳನೆಯ ಮಗು ಎಂಟನೆಯ ಮಗುವನ್ನು ಹೊಡೆದರೆ ಅಥವಾ ಲೀ ನೋ ಗೀನೋ, ಚಾಂಗ್ ಅಥವಾ ಇನ್ನಾರನ್ನೋ ಹೊಡೆದರೆ ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳುತ್ತಿರಲಿಲ್ಲ. ಹೊಡೆಯುವವರು, ಚಾವೋ ನಂತಹ ದೊಡ್ಡ ವ್ಯಕ್ತಿಗಳೊಳಗೆ ಯಾರಾದರೂ ಆಗಿದ್ದರೆ, ಅದರ ಬಗ್ಗೆ ಮಾತಾಡುವುದರಲ್ಲಿ ಅರ್ಥ ಇದೆ ಅಂತ ಭಾವಿಸಿದ್ದರು. ಅದಕ್ಕೇ ಹೊಡೆದವನು ಪ್ರಸಿದ್ಧನಾಗಿದ್ದ ಚಾವೋನೇ ಆಗಿದ್ದುದರಿಂದ ಮತ್ತು ಹೊಡೆಸಿಕೊಂಡವನಲ್ಲಿಯೂ ಹೊಡೆದವನ ದೊಡ್ಡಸ್ತಿಕೆ ಇಣುಕಿದ್ದರಿಂದ, ಚರ್ಚೆಗೆ ಯೋಗ್ಯವೆನಿಸಿತ್ತು. ಚಾವೋ ಹೊಡೀಬೇಕಾದರೆ ಆಹ್‌ಕ್ಯೂ ಅದಕ್ಕೆ ಸರಿಯಾದ ತಪ್ಪೇ ಮಾಡಿರಬೇಕು, ಯಾಕೆಂದರೆ ಚಾವೋ ತಪ್ಪು ಮಾಡಲು ಸಾಧ್ಯವೇ ಇಲ್ಲ. ಆಹ್‌ಕ್ಯೂನೇ ಒಂದು ವೇಳೆ ತಪ್ಪು ಮಾಡಿದ್ದರೆ ಜನರು ಯಾಕೆ ಅಪರೂಪದ ಗೌರವ ತೋರಿಸುತ್ತಿದ್ದಾರೆ? ಈ ಪ್ರಶ್ನೆಗೆ ಸರಿಯಾದ ಉತ್ತರ ಕೊಡೋದು ಸಾಧ್ಯವಾಗುವುದಿಲ್ಲ. ಆದರೂ ಊಹೆಯಿಂದ ಹೇಳಬಹುದಾದರೆ, ಆಹ್‌ಕ್ಯೂ ತನ್ನನ್ನು

ಚಾವೋನ ವಂಶದ ಜೊತೆಗೆ ಸೇರಿಸಿಕೊಂಡದ್ದರಿಂದ ಜನರು ಈ ಗೌರವ ತೋರಿಸುತ್ತಿರಬಹುದು. ಆಹ್‌ಕ್ಯೂ ಹೊಡೆತ ತಿಂದಿದ್ದರೂ, ಇದೇ ಕಾರಣಕ್ಕಾಗಿ, ಮತ್ತು ಆಹ್‌ಕ್ಯೂ ಹೇಳಿದ್ದರಲ್ಲಿ ಸ್ವಲ್ಪವಾದರೂ ಸತ್ಯಾಂಶ ಇದ್ದಿರಲೇ ಬೇಕು ಎಂಬ ನಂಬಿಕೆಗಾಗಿ, ಸ್ವಲ್ಪ ಹೆದರಿ, ಆಹ್‌ಕ್ಯೂಗೆ ಗೌರವ ಕೊಡುವುದರಲ್ಲಿಯೇ ತಮ್ಮ ಕ್ಷೇಮವಿದೆ ಎಂದು ಬಾವಿಸಿದ್ದರು. ಇದು ಹೇಗಿತ್ತು ಎಂದರೆ, ಕನ್‌ಫ್ಯೂಸಿಯಸ್ ಗುಡಿಯಲ್ಲಿದ್ದ ಬಲಿಯಾದ ದನದ ಮಾಂಸ, ಹಂದಿ ಮಾಂಸ, ಕೋಳಿ ಮಾಂಸದ ಹಾಗೆ ಪ್ರಾಣಿ ಮೂಲದ್ದೇ ಆಗಿದ್ದರೂ, ಸಂತನು ಈ ದನದ ಮಾಂಸವನ್ನು ತಿಂದಿದ್ದರ ಕಾರಣ ಇನ್ನುಮುಂದೆ ಮುಟ್ಟುವುದೇ ಇಲ್ಲವೆಂದು ಕನ್‌ಫ್ಯೂಸಿಯಸ್ ಪ್ರತಿಜ್ಞೆ ಮಾಡಿದ.

ಇದಾದ ಮೇಲೆ ಆಹ್‌ಕ್ಯೂ ಚೆನ್ನಾಗಿ ಅಭಿವೃದ್ಧಿ ಹೊಂದಿದ.

ವಸಂತದ ಒಂದು ದಿನ ಸಂತೋಷಾತಿರೇಕದಲ್ಲಿ ಉನ್ಮತ್ತನಾಗಿ ನಡೆಯುತ್ತಿದ್ದಾಗ, ಸೊಂಟದ ತನಕ ಬೆತ್ತಲಾಗಿ, ಗೋಡೆಗೆ ಒರಗಿ ಹೇನುಗಳನ್ನು ಹಿಡಿಯುತ್ತಾ ವಿಸ್ಕರ್ಸ್‌ವ್ಯಾಂಗ್ ಕುಳಿತಿದ್ದುದನ್ನು ಆಹ್‌ಕ್ಯೂ ನೋಡಿದ. ಈ ನೋಟ ಕಣ್ಣಿಗೆ ಬೀಳುತ್ತಿದ್ದಂತೆ ಅವನ ದೇಹದಲ್ಲಿ ಕೆರೆತ ಶುರುವಾಯಿತು. ವಿಸ್ಕರ್ಸ್‌ವ್ಯಾಂಗ್ ಕಜ್ಜಿ ಮನುಷ್ಯನಾಗಿದ್ದುದರಿಂದ ಜನ ಎಲ್ಲಾ ಅವನನ್ನು ಹುಳಕಡ್ಡಿ ಪುರುಕ ವಿಸ್ಕರ್ಸ್‌ವ್ಯಾಂಗ್ ಎಂತಲೇ ಕರೆಯುತ್ತಿದ್ದರು. ಆಹ್‌ಕ್ಯೂ ಹುಳುಕಡ್ಡಿ ಅನ್ನೋ ಪದಾನೇನೋ ಬಿಟ್ಟ. ಆದರೆ ಅವನನ್ನು ಕಂಡರೆ ತೀರಾ ಆಸಹ್ಯ ಪಟ್ಟುಕೊಳ್ಳುತ್ತಿದ್ದ. ಹುಳುಕಡ್ಡಿನ ಅಪವಾದ ಅಂತ ಮರೀಬಹುದಾದರೂ ಕೆನ್ನೆ ಮೇಲಿಂದ ಬೆಳೆದ ಪೊದೆ ಕೂದಲು ಮಾತ್ರ ಹೇಸಿಗೆ ಬರುವಂತೆ ಮಾಡುತ್ತೆ, ಎಂದುಕೊಳ್ಳುತ್ತಿದ್ದ. ಆಹ್‌ಕ್ಯೂ ಅವನ ಪಕ್ಕದಲ್ಲಿ ಕುಳಿತ. ಬೇರೆ ಇನ್ನ್ಯಾರಾದರೂ ಸೋವಾರಿ ಆಗಿದ್ದರೆ, ಇಷ್ಟು ನಿರಾಳವಾಗಿ ಕೂರುತ್ತಿರಲಿಲ್ಲ. ವಿಸ್ಕರ್ಸ್‌ವ್ಯಾಂಗ್ ಪಕ್ಕದಲ್ಲಿ ಕೂರಲು ಯಾತಕ್ಕಾಗಿ ಹೆದರಬೇಕು? ಹಾಗೆ ನೋಡಿದರೆ ತಾನು ವ್ಯಾಂಗ್‌ನ ಪಕ್ಕದಲ್ಲಿ ಕುಳಿತು ಕೊಳ್ಳುವುದು ಅವನಿಗೇ ಗೌರವದ ಸಂಗತಿ.

ಆಹ್‌ಕ್ಯೂ ಚಿಂದಿಯಾಗಿದ್ದ ಜಾಕೆಟ್ ತೆಗೆದು ಒಳಗನ್ನು ಹೊರಗೆ ಮಾಡಿದ. ಅದನ್ನು ಇತ್ತೀಚೆಗೆ ಒಗೆದಿದ್ದನೋ, ಅಥವಾ ಕೊಳಕಾಗಿಯೇ ಇತ್ತೋ, ಅಂತೂ ಚೆನ್ನಾಗಿ ಹುಡುಕಾಡಿದ ಮೇಲೆ ಒಂದು ನಾಲ್ಕೈದು ಹೇನುಗಳು ಸಿಕ್ಕವು. ವಿಸ್ಕರ್ಸ್‌ವ್ಯಾಂಗ್ ಈ ಕಡೆ ಹಿಡಿದ ಹೇನುಗಳನ್ನು ಒಂದಾದ ಮೇಲೊಂದು ತೆಗೆತೆಗೆದು ತನ್ನ ಹಲ್ಲುಗಳಿಂದ ಪಟ ಪಟ ಸದ್ದಿನೊಂದಿಗೆ ಕುಕ್ಕುತ್ತಿದ್ದ.

ಆಹ್‌ಕ್ಯೂಗೆ ನಿರಾಶೆ ಆಯಿತು. ಕೋಪವೂ ಬಂತು. ನೋಡಿದರೆ ಅಸಹ್ಯ ಅಂತ ಅನಿಸೋ ವ್ಯಾಂಗ್ ಎಷ್ಟೊಂದು ಹೇನುಗಳನ್ನು ಹಿಡೀತಿರಬೇಕಾದರೆ, ತಾನು ಮಾತ್ರ ಕೆಲವನ್ನೇ ಹಿಡಿಯಲು ಸಾಧ್ಯವಾಯಿತು. ಅವನ ಮುಂದೆ ಎಂಥ ಅವಮಾನ! ಒಂದೋ ಎರಡೋ ದೊಡ್ಡದಾದ ಹೇನುಗಳನ್ನು ಹಿಡಿಯಬೇಕೆಂದುಕೊಂಡರೂ ಸಾಧ್ಯವಾಗಲಿಲ್ಲ. ಕಷ್ಟಪಟ್ಟು ಕಡೆಗೆ ಸುಮಾರು ದಪ್ಪವೂ ಅಲ್ಲದ, ಸಣಕಲೂ ಅಲ್ಲದ ಒಂದನ್ನು ಹಿಡಿದ ಮತ್ತು ಅದನ್ನು ಬಾಯಲ್ಲಿ ತುರುಕಿಕೊಂಡು ಬಕಾಸುರನಂತೆ ಅಗಿದ. ಆದರೆ ಅದರಿಂದಾದ ಸದ್ದು ಸುಮಾರಾಗಿತ್ತು, ವಿಸ್ಕರ್ಸ್‌ವ್ಯಾಂಗ್‌ನ ಬಾಯಿಂದ ಹೊರಡುತ್ತಿದ್ದ ಸದ್ದಿಗಿಂತ ಕಡೆಯದಾಗಿತ್ತು.

ಆಹ್‌ಕ್ಯೂನ ಕಲೆಗಳೆಲ್ಲ ಕೆಂಪು ಬಣ್ಣಕ್ಕೆ ತಿರುಗಿದ್ದವು. ತನ್ನ ಜ್ಯಾಕೆಟ್ಟನ್ನು ನೆಲದ ಮೇಲೆ ಒಗೆದ, ಉಗಿದು ಹೇಳಿದ- "ರೋಮದ ಹುಳುವೇ!"

"ಕೊಳಕು ನಾಯಿ!" ಯಾರನ್ನೋ ಬೈತಿರೋದು? ವಿಸ್ಕರ್ಸ್‌ವ್ಯಾಂಗ್ ತಿರಸ್ಕಾರದಿಂದ ನೋಡಿದ.

ಆಹ್‌ಕ್ಯೂನ ಬಗ್ಗೆ ಇತ್ತೀಚೆಗೆ ಹೆಚ್ಚಿದ ಗೌರವ ಅವನಲ್ಲಿ ಹೆಮ್ಮೆ ಮೂಡಿಸಿದ್ದರೂ, ಜಗಳ ಮಾಡೋದನ್ನೇ ಅಭ್ಯಾಸಮಾಡಿಕೊಂಡಿದ್ದ ಅಲೆಮಾರಿಗಳನ್ನು ಕಂಡರೆ ಮಾತ್ರ ಇನ್ನೂ ಸ್ವಲ್ಪ ಹೆದರಿಕೆ ಇತ್ತು. ಆದರೆ ಈ ಸಂದರ್ಭದಲ್ಲಿ ಮಾತ್ರ ಆಹ್‌ಕ್ಯೂ ಜಗಳಕ್ಕೆ ಸಿದ್ಧನಾಗಿದ್ದಂತೆ ಕಾಣಿಸಿದ.

"ರೋಮ ಕೀಟವೆ, ನನ್ನನ್ನು ಬೈಯೋಕೆ ನಿನಗೆಷ್ಟೋ ಧೈರ್ಯ?"

"ಯಾವನೋ ಅವನು?" ಅಂತ ಹೇಳುತ್ತಾ ತನ್ನ ಸೊಂಟದ ಮೇಲೆ ಕೈಯಿರಿಸಿ ನಿಂತುಕೊಂಡ.

"ಯಾಕೋ ಜಗಳ ಮಾಡ್ಬೇಕೂಂತ ಇದ್ದೀಯ?" - ಎಂದು ಹೇಳುತ್ತ ತಾನೂ ನಿಂತು, ಕೋಟನ್ನು ಏರಿಸಿಕೊಂಡ.

ವ್ಯಾಂಗ್ ಓಡಿ ಹೋಗಬಹುದೆಂದು ಎಣಿಸಿ, ಒಂದೆರಡು ಹೆಜ್ಜೆ ಮುಂದೆ ಬಂದು ಮುಷ್ಠಿ ಎತ್ತಿ ಅವನನ್ನು ಗುದ್ದಲು ಮುಂದಾದ. ಆದರೆ ಅವನು ಹೊಡಯುವುದಕ್ಕೆ ಮೊದಲೇ ವ್ಯಾಂಗ್, ಆಹ್‌ಕ್ಯೂನನ್ನು ಹಿಡಿದು ಒಂದು ತದುಕಿದ. ಇದರಿಂದ ಆಹ್‌ಕ್ಯೂ ತತ್ತರಿಸಿ ಹೋದ. ವ್ಯಾಂಗ್ ಆಹ್‌ಕ್ಯೂನ ಪಿಗ್‌ಟೇಲ್ ಹಿಡಿದು ದರದರ

ಗೋಡೆ ಬಳಿಗೆ ಎಳೆದು ತಂದು, ರೂಢಿಯಂತೆ ಅವನ ತಲೆಯನ್ನು ಗೋಡೆಗೆ ಘಟ್ಟಿಸಲು ಅಣಿಯಾದ.

"ಸಜ್ಜನನಾದವನು ಮಾತಾಡ್ತಾನೇ ಹೊರತಾಗಿ ಕೈ ಹೀಗೆ ಮುಂದು ಮಾಡೋದಿಲ್ಲ" ತಲೆ ಒಂದು ದಿಕ್ಕಿಗೆ ಹೊರಳಿಸಿ, ವಿರೋಧಿಸುತ್ತ ಹೇಳಿದ.

ವ್ಯಾಂಗ್, ಹಾಗೆ ನೋಡಿದರೆ ಸಜ್ಜನನೇನೂ ಆಗಿರಲಿಲ್ಲ. ಆಹ್‌ಕ್ಯೂನ ಮಾತೊಂದೂ ಅವನ ತಲೆಗೆ ಹೋಗಲಿಲ್ಲ. ಆಹ್‌ಕ್ಯೂನನ್ನು ಎಳೆದೆಳೆದು ಐದಾರು ಬಾರಿ ಗೋಡೆಗೆ ಢೀ ಹೊಡೆಸಿದ. ಒಂದು ಸಲ ಜೋರಾಗಿ ಹೊಡೆಸಿ, ಒದ್ದು ಎಸೆದದ್ದಕ್ಕೆ ಆಹ್‌ಕ್ಯೂ, ಎರಡು ಗಜದಷ್ಟು ದೂರ ಹೋಗಿ ಬಿದ್ದ. ಆಮೇಲೇನೆ ವ್ಯಾಂಗ್ ತೃಪ್ತಿಯಿಂದ ಅಲ್ಲಿಂದ ಕಾಲ್ತೆಗೆದ.

ಆಹ್‌ಕ್ಯೂ ನೆನಪಿನಲ್ಲಿ ಉಳಿದದ್ದೆಂದರೆ, ಇಂತಹ ಅವಮಾನ ಆದದ್ದು ಇದೇ ಮೊದಲ ಸಲ. ವ್ಯಾಂಗ್‌ನ ಅಸಹ್ಯವಾದ ಗಡ್ಡ ಮೀಸೆಗಳಿಗಾಗಿ ಆಹ್‌ಕ್ಯೂ ಯಾವಾಗಲೂ ಅವನನ್ನು ಗೇಲಿ ಮಾಡುತ್ತಿದ್ದ. ಆದರೆ ತಾನೆಂದೂ ಗೇಲಿಗೆ ಒಳಗಾಗುತ್ತಿರಲಿಲ್ಲ. ಒದೇನೂ ತಿಂದಿರಲಿಲ್ಲ. ಆದರೆ ಇವತ್ತು ಅವನ ನಿರೀಕ್ಷೆಗೆ ವಿರುದ್ಧವಾಗಿ ವಿಸ್ಕರ್ಸ್‌ವ್ಯಾಂಗ್ ಅವನನ್ನು ಚೆನ್ನಾಗಿ ಥಳಿಸಿಯೂ ಇದ್ದ. ಪೇಟೆ ಜಾಗದಲ್ಲಿ ಅವರು ಹೇಳಿದ್ದರಲ್ಲಿ ನಿಜ ಇತ್ತು. "ಚಕ್ರವರ್ತಿಗಳು ಅಧಿಕೃತ ಪರೀಕ್ಷೆಗಳನ್ನು ರದ್ದು ಪಡಿಸಿದ್ದ ಕಾರಣ ವಿದ್ವಾಂಸರಿಗೆ ಈಗ ಬೇಡಿಕೆಯೇ ಇರಲಿಲ್ಲ." ಪರಿಣಾಮವಾಗಿ ಚಾವೋ ಕುಟುಂಬ ಪ್ರತಿಷ್ಠೆಯನ್ನು ಕಳೆದುಕೊಂಡಿತ್ತು. ಬಹುಶಃ ಇದೇ ಕಾರಣಕ್ಕೆ ಅವನನ್ನು ಹೀಗೆ ತಿರಸ್ಕಾರದಿಂದ ಕಾಣುತ್ತಿದ್ದರೋ ಏನೋ?

ಆಹ್‌ಕ್ಯೂ ಮೀನ ಮೇಷ ನೋಡುತ್ತಾ ನಿಂತ. ದೂರದಿಂದ ಆಹ್‌ಕ್ಯೂನ ಇನ್ನೊಬ್ಬ ವಿರೋಧಿ ಬಂದ. ಮಿಸ್ಟರ್ ಚಿಯನ್‌ನ ಹಿರಿಯ ಮಗ. ಇವನನ್ನು ಕಂಡರೂ ಆಹ್‌ಕ್ಯೂ ಅಸಹ್ಯ ಪಡುತ್ತಿದ್ದ. ಸಿಟಿನಲ್ಲಿದ್ದ ಯಾವುದೋ ವಿದೇಶಿ ಶಾಲೆಯಲ್ಲಿ ಓದಿ, ಜಪಾನಿಗೆ ಹೋಗಿದ್ದನಂತೆ. ಆರು ತಿಂಗಳಾದ ಮೇಲೆ ಅವನು ಬಂದಾಗ ಅವನ ಕಾಲುಗಳು ನೇರವಾಗಿದ್ದವು. ಪಿಗ್ ಟೇಲ್ ಅದೃಶ್ಯವಾಗಿತ್ತು. ಅವನಮ್ಮ ಜೋರಾಗಿ ಅತ್ತಿದ್ದಳು. ಅವನ ಹೆಂಡತಿ ಮೂರು ಬಾರಿ ಬಾವಿಯಲ್ಲಿ ಬೀಳಲು ಪ್ರಯತ್ನಿಸಿದ್ದಳು. ಆಮೇಲೆ ಅವರ ಅಮ್ಮ ಹೇಳಿದರು - ನನ್ನ ಮಗ ಕುಡಿದು ಮಲಗಿದ್ದಾಗ ಯಾರೋ ದುಷ್ಟ ಅವನ ಜುಟ್ಟನ್ನು ಕತ್ತರಿಸಿಬಿಟ್ಟಿದ್ದಾನೆ. ಅವನು ಅಧಿಕಾರಿಯಾಗಬಹುದಿತ್ತು. ಆದರೆ ಈಗ

ಜುಟ್ಟು ಬೆಳೆಯುವ ತನಕ ಕಾಯಬೇಕಾಗುತ್ತೆ. ಆಹ್‌ಕ್ಯೂ ಮಾತ್ರ ಇದ್ಯಾವುದನ್ನೂ ನಂಬಲಿಲ್ಲ. ಅದಕ್ಕೆ ಅವನನ್ನು ಅನುಕರಣೆಯ ವಿದೇಶಿ ದೆವ್ವ! ವಿದೇಶಿ ಕೂಳಿನ ದೇಶದ್ರೋಹಿ ಅಂತ ಕರೆಯುವುದನ್ನೇ ರೂಢಿ ಮಾಡಿಕೊಂಡಿದ್ದ. ಉಸಿರು ಕಟ್ಟುವ ಹಾಗೆ ಅವನಿಗೆ ಶಾಪ ಹಾಕುತ್ತಿದ್ದ.

ಅವನಲ್ಲಿದ್ದ ಕೃತಕವಾದ ಜುಟ್ಟನ್ನು ಎಲ್ಲಕ್ಕಿಂತ ಹೆಚ್ಚಾಗಿ ಅಸಹ್ಯಪಡುತ್ತಿದ್ದ. ಕೃತಕ ಜುಟ್ಟನ್ನು ಧರಿಸಿದವನನ್ನು ಮನುಷ್ಯ ಅಂತಲೇ ಭಾವಿಸುತ್ತಿರಲಿಲ್ಲ. ಇನ್ನು ಅವನ ಹೆಂಡತಿ ನಾಲ್ಕನೇ ಸಲಕ್ಕೆ ಬಾವಿಗೆ ಬೀಳಲು ಪ್ರಯತ್ನಿಸಲಿಲ್ಲವಾದ ಕಾರಣ, ಅವಳೂ ಒಳ್ಳೆಯ ಹೆಂಗಸು ಎನಿಸಿಕೊಳ್ಳಲಿಲ್ಲ.

ಈಗ ಅನುಕರಣೆಯ ವಿದೇಶಿ ಪಿಶಾಚಿ ಹತ್ತಿರ ಬರುತ್ತಿದ್ದ.

"ಬೋಳುತಲೆಯ ಕತ್ತೆ"... ತನಗೆ ಮಾತ್ರ ಕೇಳಿಸುವಂತೆ, ಮೊದಮೊದಲು ಬೈಯ್ಯುತ್ತಿದ್ದ. ಆದರೆ ಇವತ್ತು, ಅವನೂ ಕೋಪದಲ್ಲಿದ್ದ. ತನ್ನೊಳಗಿನ ಉದ್ವೇಗವನ್ನೆಲ್ಲಾ ಚೆಲ್ಲಿಕೊಳ್ಳಬೇಕೆಂದು ಕಾಯುತ್ತಿದ್ದುದರಿಂದ, ಅವನಿಗರಿವಿಲ್ಲದೆ, ಅಪ್ರಯತ್ನ ಪೂರ್ವಕವಾಗಿ ಬೈಗುಳು ಹೊರಗೆ ಬಂದವು.

ದುರಾದೃಷ್ಟಕ್ಕೆ ಈ ಬೋಳುತಲೆ ಕಂದು ಬಣ್ಣದ ಹೊಳಪಿನ ಕೋಲೊಂದನ್ನು ಹಿಡಿದಿತ್ತು. ಆಹ್‌ಕ್ಯೂ ಇದನ್ನು ಶೋಕಧಾರಿ ದಂಡ ವೆಂದು ಕರೆಯುತ್ತಿದ್ದ. ವೇಗದ ಹೆಜ್ಜೆಯೊಂದಿಗೆ ಬಂದು ಆಹ್‌ಕ್ಯೂನ ಬೆನ್ನ ಮೇಲೆ ಬಿಗಿದ. ಇದನ್ನು ಈ ಮೊದಲೇ ನಿರೀಕ್ಷಿಸಿದ್ದ ಆಹ್‌ಕ್ಯೂ ತನ್ನ ಬೆನ್ನನ್ನು ಸೆಟೆಸಿ ಅಣಿಯಾಗಿದ್ದ. ಪ್ರತಿಧ್ವನಿಸುತ್ತ ಬಿದ್ದ ಧಪ್ ಧಪ್ ಹೊಡೆತ ಬೆನ್ನಿಂದ ತಲೆ ತಲುಪಿತು.

"ನನಗೆ ಗೊತ್ತಿತ್ತು" ಹತ್ತಿರ ನಿಂತಿದ್ದ ಮಗುವಿಗೆ, ಆಹ್‌ಕ್ಯೂ ಹೇಳಿದ.

ಧಪ್! ಧಪ್! ಧಪ್!

ಆಹ್‌ಕ್ಯೂಗೆ ನೆನಪಿದ್ದಂತೆ ಇದು ಎರಡನೇ ಸೋಲು. ಹೊಡೆತಗಳು ನಿಂತಮೇಲೆ, ಎಲ್ಲ ಮುಗೀತು ಅಂದುಕೊಂಡ. ಅವನಿಗೂ ಒಂದು ರೀತಿಯಲ್ಲಿ ಬಿಡುಗಡೆ ಎನಿಸಿತು. ಜೊತೆಗೆ ಹಿಂದಿನವರಿಂದ ಕಲಿತು ಬಂದಿದ್ದ ಮರೆತು ಬಿಡುವ ಗುಣ, ಅವನ ನೆರವಿಗೆ ಬಂತು. ನಿಧಾನವಾಗಿ ಹೆಜ್ಜೆಹಾಕುತ್ತ ಹೆಂಡದಂಗಡಿ ಸಮೀಪಿಸಿದಾಗ, ಅವನು ಮತ್ತೆ ಸಂತೋಷವಾಗಿದ್ದ.

ಅಷ್ಟು ಹೊತ್ತಿಗೆ ಸರಿಯಾಗಿ "ಕ್ವಯಟ್ ಸೆಲ್ಫ್ ಇಂಪ್ರೂವ್‌ಮೆಂಟ್" ಕಾನ್ವೆಂಟಿನ ಕ್ರೈಸ್ತ ಕಿರಿವಯಸಿನ ಸನ್ಯಾಸಿನಿಯೊಬ್ಬಳು ಅವನೆಡೆಗೆ ಬಂದಳು. ಸನ್ಯಾಸಿನಿ ದೃಷ್ಟಿಗೆ ಬೀಳುತ್ತಿದ್ದಂತೆ ಆಹ್‌ಕ್ಯೂಗೆ ತಪ್ಪೊಪ್ಪಿಕೊಳ್ಳುವಂತೆ ಅನಿಸುತ್ತಿತ್ತು. ಅವನಿಗಾದ ಅಷ್ಟೆಲ್ಲ ಅವಮಾನದ ನಂತರವೂ ನಡೆದದ್ದನ್ನೆಲ್ಲ ನೆನಪಿಸಿಕೊಂಡಾಗ ಅವನ ಕೋಪ ಮರುಕಳಿಸಿತು.

"ಇವತ್ತಿನ ನನ್ನ ದುರಾದೃಷ್ಟವೆಲ್ಲ ನಿನ್ನನ್ನು ನೋಡಬೇಕಾಗಿ ಬಂದದ್ದಕ್ಕೆ!" ತನ್ನಲ್ಲಿಯೇ ಹೇಳಿಕೊಂಡ.

ಆಕೆಯ ಬಳಿಗೆ ಹೋಗಿ ಜೋರಾಗಿ ಸದ್ದು ಮಾಡುತ್ತ ಉಗಿದ... ಊಹ್... ಪಾಹ್...

ಆ ಚಿಕ್ಕ ಸನ್ಯಾಸಿನಿ ಅವನ ಕಡೆ ಲಕ್ಷ್ಯವನ್ನೇ ಕೊಡದೆ, ತಲೆ ಬಗ್ಗಿಸಿಕೊಂಡು ನಡೆದಳು. ಆಹ್‌ಕ್ಯೂ ಅವಳ ಹತ್ತಿರ ಹೋಗಿ ಕೈಚಾಚಿ ಅವಳ ನುಣ್ಣನೆಯ ತಲೆ ಮೇಲೆ ಕೈಯಾಡಿಸಿದ. "ಬೋಳು ತಲೆ!.... ಬೇಗ ಹೋಗು. ನಿನ್ನ ಸನ್ಯಾಸಿ ನಿನಗಾಗಿ ಕಾಯುತ್ತಿರಬಹುದು...."

"ಯಾರನ್ನೋ ತಮಾಷೆ ಮಾಡ್ತಿರೋದು?.... ನಾಚಿಕೆಯಿಂದ ಕೆಂಪಾಗುತ್ತ ಕೇಳಿದಳು. ಹಾಗೆಯೇ ಬೇಗ ಬೇಗ ಹೆಜ್ಜೆ ಹಾಕಿದಳು.

ಹೆಂಡದಂಗಡಿಯಲ್ಲಿ ಇದ್ದ ಜನ ನಗತೊಡಗಿದರು. ತನ್ನ ಸಾಹಸವನ್ನು ಮೆಚ್ಚಿದ್ದನ್ನು ಗಮನಿಸಿ, ಆಹ್‌ಕ್ಯೂ ಇನ್ನಷ್ಟು ಖುಷಿ ಪಟ್ಟ.

"ಸನ್ಯಾಸಿ ತಮಾಷೆ ಮಾಡಬಹುದಾದರೆ, ನಾನ್ಯಾಕೆ ಮಾಡಬಾರದು?" ಅಂತ ಹೇಳುತ್ತ ಅವಳ ಕೆನ್ನೆ ಚಿವುಟಿದ.

ಮತ್ತೆ ಹೆಂಡದಂಗಡಿಯಲ್ಲಿದ್ದವರು ಜೋರಾಗಿ ನಗಲು ತೊಡಗಿದರು. ಆಹ್‌ಕ್ಯೂ ಇನ್ನಷ್ಟು ಇದರಿಂದ ಖುಷಿಪಟ್ಟ. ನೋಡುತ್ತಿದ್ದವರನ್ನು ಮತ್ತೂ ತೃಪ್ತಿ ಪಡಿಸಲು, ಅವಳನ್ನು ಹೋಗಲು ಬಿಡುವ ಮುಂಚೆ ಮತ್ತೊಮ್ಮೆ ಕೆನ್ನೆ ಚಿವುಟಿದ.

ಇದೆಲ್ಲ ನಡೆಯುವಷ್ಟು ಹೊತ್ತಿಗೆ, ವಿಸ್ಕರ್ಸ್ ವ್ಯಾಂಗ್, ವಿದೇಶೀ ಪಿಶಾಚಿ, ಇವರುಗಳನ್ನೆಲ್ಲ ಮರೆತು ಬಿಟ್ಟಿದ್ದ. ಇಡೀ ದಿನದ ದುರದೃಷ್ಟಕ್ಕೆ ಪರಿಹಾರ ಸಿಕ್ಕಂತಾಗಿತ್ತು. ಆ ಹೊಡೆತಗಳು ತಿಂದಮೇಲೆ ಈಗ ನಿರಾಳ ಎನಿಸಿತ್ತು. ಗಾಳಿಯಲ್ಲಿ ತೇಲುತ್ತಿರುವಂತಹ ಅನುಭವ ಅವನದಾಗಿತ್ತು.

ದೂರದಲ್ಲಿ ಚಿಕ್ಕ ಸನ್ಯಾಸಿನಿ ಕಣ್ಣು ತುಂಬಿಕೊಂಡು "ನೀನು ಗಂಡು ಮಕ್ಕಳಿಲ್ಲದೆ ಸಾಯುವಂತಾಗು" ಎಂದು ಶಪಿಸಿದಳು.

ಆಹ್‌ಕ್ಯೂ ಅಟ್ಟಹಾಸದಿಂದ ನಕ್ಕ.

ಹೆಂಡದಂಗಡಿಯಲ್ಲಿದ್ದವರೂ ಇದೇ ರೀತಿಯಲ್ಲಿ ನಕ್ಕರಾದರೂ ನಗುವಿನ ತೀವ್ರತೆ ಸ್ವಲ್ಪ ಕಡಿಮೆ ಇತ್ತು.

# ಅಧ್ಯಾಯ - ೪

## ಪ್ರೀತಿಯ ದುರಂತ

ಜಯಶಾಲಿಗಳಾದ ಕೆಲವು ಮಂದಿ ಇರುತ್ತಾರೆ. ತಮ್ಮ ಎದುರಾಳಿಗಳು ಬಹಳ ಪರಾಕ್ರಮಿಗಳಾಗಿದ್ದಾಗ ಸಿಂಹಗಳಂತೆ ಇದ್ದರೆ, ಅವರಿಂದಾದ ಗೆಲುವನ್ನು ಹೆಮ್ಮೆಯಿಂದ ಒಪ್ಪಿಕೊಳ್ಳುತ್ತಾರೆ; ಆದರೆ ಎದುರಾಳಿಗಳು ಹೇಡಿಗಳಾಗಿ, ಕುರಿಗಳಂತೆ ಇದ್ದರೆ, ಅವರ ಮೇಲೆ ಗೆಲುವನ್ನು ಪಡೆದರೂ ಆ ಗೆಲುವಿನಿಂದ ಸಂತೃಪ್ತರಾಗುವುದೇ ಇಲ್ಲ. ಇನ್ನೂ ಕೆಲವರು ಇರುತ್ತಾರೆ, ಶತ್ರುಗಳನ್ನು ಕೊಂದು, ಅವರು ಶರಣಾಗತರಾಗುವಂತೆ ಮಾಡಿ, ಸೋಲಿನಿಂದ ಪೂರ್ತಿಯಾಗಿ ಬಾಗುವಂತೆ ಮಾಡಿ... ಇನ್ನೂ ಏನೇನೋ ರೀತಿಯಲ್ಲಿ ಗೆದ್ದಿದ್ದರೂ, ಅವರು ಒಂಟಿತನ, ಅನಾಥತೆ ಯಾರಿಗೂ ಬೇಡವಾದವರಂತೆ ತಮ್ಮನ್ನು ಭಾವಿಸಿಕೊಳ್ಳುತ್ತಾರೆ. ಆಗ ಅವರಿಗೆ, ಅವರ ಗೆಲುವು ಕೇವಲ ಒಂದು ದುರಂತವಾಗಿ ಕಾಣಿಸುತ್ತದೆ. ಆದರೆ ನಮ್ಮ ಕಥಾನಾಯಕ ಇಷ್ಟೊಂದು ನರಸತ್ತವನಲ್ಲ. ಯಾವಾಗಲೂ ಉತ್ಸಾಹಿಯಾಗಿ ಇರುತ್ತಿದ್ದ. ಪ್ರಪಂಚದ ಇತರ ರಾಷ್ಟ್ರಗಳ ಮೇಲೆ ಚೀನಾದ ನೈತಿಕ ದಿಗ್ವಿಜಯಕ್ಕೆ ಇದು ಸಾಕ್ಷಿಯಾಗಿದೆ.

ಆಹ್‌ಕ್ಯೂನನ್ನು ನೋಡಿದಾಗ, ಗೆಲುವು, ಸಂಭ್ರಮಗಳೊಂದಿಗೆ ಈ ಕ್ಷಣ ಹಾರಲು ಸಿದ್ಧನಾಗಿರುವಂತಿದ್ದಾನೆ.

ಈ ದಿಗ್ವಿಜಯಕ್ಕೆ ವಿಚಿತ್ರ ಪರಿಣಾಮಗಳು ಇಲ್ಲದೆ ಇಲ್ಲ. ಸಾಕಷ್ಟು ಹೊತ್ತು ಹಾರುತ್ತಲೇ ಇದ್ದ. ಹಾರುತ್ತ ಹಾರುತ್ತ ತನ್ನ ರಕ್ಷಕ ದೇವರ ಗುಡಿಗೆ ಹಾರಿದ. ಮಾಮೂಲಗಿದ್ದರೆ, ಅವನು ಅಲ್ಲಿ ತಲೆಯೂರಿದ ಕ್ಷಣದಲ್ಲೇ ನಿದ್ದೆ ಮಾಡುತ್ತಿದ್ದ. ಆದರೆ ಈ ದಿನ ಸಂಜೆ ಅವನಿಗೆ ನಿದ್ದೆ ಮಾಡಲು ಆಗಲೇ ಇಲ್ಲ. ತನ್ನ ಕೈ ಹೆಬ್ಬೆರಳು, ಕಿರುಬೆರಳಿಗೆ ಏನೋ ಆದ ಹಾಗೆ ಇದೆ. ಮಾಮೂಲಿಗಿಂತ, ಮುಟ್ಟಿದರೆ ನುಣುಪಾಗಿದೆ. ಚಿಕ್ಕ ಸನ್ಯಾಸಿನಿಯ ಕೆನ್ನೆಯ ನುಣುಪೇನಾದರೂ ಬೆರಳುಗಳಿಗೆ ಮೆತ್ತಿಕೊಂಡಿದೆಯೋ ಇಲ್ಲ ತನ್ನ ಬೆರಳುಗಳು ಅವಳ ಕೆನ್ನೆಯ ಮೇಲೆ ಮೃದುವಾದುದನ್ನೇನಾದರೂ ಸವರಿದೆಯೋ! - ಹೇಳುವುದು ಕಷ್ಟ!

"ಆಹ್‌ಕ್ಯೂ, ಗಂಡು ಮಕ್ಕಳಿಲ್ಲದೆ ನೀನು ಸಾಯುವಂತಾಗು"

ಈ ಮಾತುಗಳು ಆಹ್‌ಕ್ಯೂನ ಕಿವಿಗಳಲ್ಲಿ ಅನುರಣಿಸಿದವು. ಹೇಳಿದ್ದು ಸರಿ! ನಾನು ಮದುವೆಯಾಗಿ ಹೆಂಡತಿಯನ್ನು ಪಡೆಯಬೇಕು. ಇಲ್ಲವಾದಲ್ಲಿ ನನ್ನ ಪ್ರೇತಾತ್ಮಕ್ಕೆ

ಪಿಂಡದಾನ ಮಾಡಲು ಯಾರೊಬ್ಬರೂ ಇರುವುದಿಲ್ಲ. ಖಂಡಿತ ನನಗೊಬ್ಬಳು ಹೆಂಡತಿ ಬೇಕೇ ಬೇಕು". ಮೂರು ರೀತಿಯ ರಕ್ತ ಸಂಬಂಧಗಳಿವೆ. ಆದರೆ ಅತ್ಯಂತ ಭಯಂಕರವಾದ ವಿಚಾರವೆಂದರೆ ಸಂತಾನವಿಲ್ಲದೆ ವಂಶ ಮುಂದುವರಿಸದೆ ಉಳಿಯುವುದು. ಎಲ್ಲಕ್ಕಿಂತ ಇನ್ನೊಂದು ದುರಂತವೆಂದರೆ, ಪ್ರೇತಾತ್ಮಗಳು, ತಮ್ಮ ವಂಶದವರಿಲ್ಲದೆ ಹೋದರೆ ಉಪವಾಸ ಸಾಯುತ್ತವೆ. ಈ ನಂಬಿಕೆಗಳು ಸಾಧು ಸಂತರು ಹೇಳಿರುವುದಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ. ನಂತರ ಅವನು ಹುಚ್ಚುಚ್ಚಾಗಿ ಓಡಿ ಹೋದದ್ದು ಅಯ್ಯೋ ಪಾಪ ಅನಿಸುತ್ತೆ.

"ಹೆಂಗಸು! ಹೆಂಗಸು!" ಅವನು ಯೋಚಿಸಿದ. ಸನ್ಯಾಸಿ ಗೇಲಿ ಮಾಡ್ತಾನೆ... ಹೆಂಗಸು... ಹೆಂಗಸು... ಮತ್ತೆ ಅವನು ಯೋಚಿಸಿದ.

ಆಮೇಲೆ ಆಹ್‌ಕ್ಯೂ ಯಾವಾಗ ನಿದ್ದೆಗೆ ಬಿದ್ದನೆಂದು ಗೊತ್ತಾಗಲಿಲ್ಲ. ಇದಾದ ಮೇಲೆ ಅವನಿಗೆ ಅವನ ಬೆರಳುಗಳು ಬಹಳ ಮೃದು ಅನಿಸತೊಡಗಿತು. ಮನಸ್ಸು ಹಗುರವಾಯಿತು. "ಹೆಂಗಸು!"... ಅವನು ಯೋಚಿಸುತ್ತಲೇ ಇದ್ದ.

ಇದಾದ ನಂತರ, ನಮಗೆ ಅನಿಸುತ್ತೆ ಹೆಂಗಸು ಮನುಷ್ಯ ಕುಲಕ್ಕೆ ಒಂದು ತಲೆನೋವು! ಎಂದುಕೊಂಡ. ಹೆಂಗಸರಿಂದಾಗಿ ಹಾಳಾಗದಿದ್ದರೆ ಎಷ್ಟೊಂದು ಚೀನೀ ಪುರುಷರು ಸಾಧು ಸಂತರಾಗಿ ಇರುತ್ತಿದ್ದರು. ಆದರೆ ದುರಾದೃಷ್ಟ. ಹಾಗಾಗಲಿಲ್ಲ. ಷ್ಯಾಂಗ್ ವಂಶ ತಾಚೀ ಎಂಬ ಹೆಣ್ಣಿಂದ ನಾಶವಾಯಿತು. ಚಾ ವಂಶ ಪಾನ್‌ಷ್ಟು ವಿನಿಂದ ನಿರ್ನಾಮವಾಯಿತು. ಚಿನ್‌ವಂಶ ಹೇಗೆ ನಾಶವಾಯಿತು ಅನ್ನೋದಕ್ಕೆ ಐತಿಹಾಸಿಕ ಪ್ರಮಾಣವಿಲ್ಲದಿದ್ದರೂ, ಹೆಣ್ಣೊಬ್ಬಳು ಕಾರಣವಾಗಿರಬೇಕು ಎಂದರೆ, ಸತ್ಯಕ್ಕೆ ದೂರವೇನಲ್ಲ. "ತೂಂಗ್ ಷೋ" ನ ಸಾವು ತಿಯಾವೋ ಚಾನ್‌ಳಿಂದ ಸಂಭವಿಸಿದ್ದು ಸತ್ಯ ಸಂಗತಿಯಾಗಿದೆ.

ಆಹ್‌ಕ್ಯೂ ಕೂಡಾ ಪ್ರಾರಂಭಕ್ಕೆ ನೈತಿಕ ಶಿಸ್ತಿನ ಮನುಷ್ಯನೇ ಆಗಿದ್ದ. ಯಾರಾದರೂ ಗುರುಗಳು ಮಾರ್ಗದರ್ಶನ ನೀಡಿದರೋ ಏನೋ ಗೊತ್ತಿಲ್ಲ. ಅಂತೂ ಅವನು ಮಾತ್ರ ಸ್ತ್ರೀ ಪುರುಷ ಸಂಬಂಧಗಳನ್ನು ಪ್ರತ್ಯೇಕವಾಗಿ ಬೇರೆ ಬೇರೆಯಾಗಿ ಪರಿಗಣಿಸುತ್ತಿದ್ದ. ಸನ್ಯಾಸಿನಿಯಂತೆ, ಅನುಕರಣೆಯ ವಿದೇಶಿ ಪಿಶಾಚಿಯಂತೆ ಅಸಂಪ್ರದಾಯಿಕವಾದ ಕೆಲಸಗಳನ್ನು ಮಾಡದೆ ಇದ್ದುದು ಸರಿಯಾಗಿತ್ತು. ಅವನದೇ ಆದ ಕೆಲವು ಅಭಿಪ್ರಾಯಗಳಿದ್ದವು - ಸನ್ಯಾಸಿನಿಯರು ಸನ್ಯಾಸಿಯ ಜೊತೆಯಲ್ಲಿ ಗುಪ್ತವಾಗಿ

ವ್ಯವಹರಿಸಬೇಕು; ಹೆಣ್ಣೊಬ್ಬಳು ಬೀದಿಯಲ್ಲಿ ಒಂಟಿಯಾಗಿ ಹೋಗುವುದು ಪುರುಷರನ್ನು ದಾರಿತಪ್ಪಿಸುವುದಕ್ಕಾಗಿ. ಗಂಡು-ಹೆಣ್ಣು ಒಟ್ಟಿಗೆ ಮಾತಾಡುತ್ತಿದ್ದರೆ, ತಾವು ತಮ್ಮ ಭೇಟಿಯನ್ನು ನಿರ್ಧರಿಸಲು ಮಾತ್ರ ಇರಬೇಕು! ಇಂಥವರನ್ನು ತಿದ್ದುವುದಕ್ಕಾಗಿ ಜೋರಾಗಿ ಏನಾದರೂ ಟೀಕೆ ಮಾಡುತ್ತಿದ್ದ; ದುರುಗುಟ್ಟಿ ಕೋಪದಿಂದ ನೋಡುತ್ತಿದ್ದ; ಸ್ಥಳದಲ್ಲಿ ಯಾರೂ ಇಲ್ಲದಿದ್ದರೆ ಹಿಂದಿನಿಂದ ಕಲ್ಲೊಂದನ್ನು ಎಸೆಯುತ್ತಿದ್ದ. ದೃಢವಾಗಿ ನಿಲ್ಲಬೇಕಾದ ಮೂವತ್ತನೇ ವಯಸ್ಸಿನಲ್ಲಿ ಇರುವವನು, ಸನ್ಯಾಸಿನಿಯ ವಿಷಯದಲ್ಲಿ ತಲೆಕೆಡಿಸಿಕೊಳ್ಳುತ್ತಾನೆಂದು ಯಾರು ತಾನೇ ಹೇಳಬಲ್ಲರು? ನಮ್ಮ ಪುರಾತನ ವಿಧಿನಿಯಮಗಳ ಪ್ರಕಾರ ಈ ಬಗೆಯ ನಿರಾತಂಕ ಮನಸ್ಸು ಆಕ್ಷೇಪಾರ್ಹವಾದುದು. ಹಾಗಾಗಿ ಹೆಂಗಸರು ಧಿಕ್ಕಾರ ಯೋಗ್ಯರು. ಆ ಎಳೆಯ ಸನ್ಯಾಸಿನಿಯ ಮುಖ ಮೃದುವಾಗಿ, ನುಣುಪಾಗಿ ಇದ್ದಿರದಿದ್ದರೆ ಆಹ್‌ಕ್ಯೂ ಅವಳಿಂದ ಹೀಗೆ ಮರುಳಾಗುತ್ತಿರಲಿಲ್ಲ. ಇಲ್ಲ ಅವಳು ತನ್ನ ಮುಖವನ್ನು ಬಟ್ಟೆಯಿಂದ ಮುಚ್ಚಿಕೊಂಡಿದ್ದರೂ ಇಂತಹ ಅಪಾಯವಿರುತ್ತಿರಲಿಲ್ಲ. ಐದಾರು ವರ್ಷಗಳ ಹಿಂದೆ ಒಂದು ಸಲ ಯಾವುದೋ ಒಂದು ಒಪೆರಾ ನೋಡುತ್ತಿದ್ದಾಗ, ಪ್ರೇಕ್ಷಕ ಹೆಂಗಸೊಬ್ಬಳ ಕಾಲುಗಳನ್ನು ಚಿವುಟಿದ್ದ. ಆದರೆ ಅವಳು ಹಾಕಿದ್ದ ಟ್ರಾಜರ್‌ನಿಂದ ಅವನಿಗೆ ಅವಳ ಚರ್ಮದ ಸ್ಪರ್ಷ ಆಗಲಿಲ್ಲವಾದ ಕಾರಣ ಈ ರೀತಿ ಮರುಳಾಗಲಿಲ್ಲ. ಎಳೆ ಸನ್ಯಾಸಿನಿ ಬಟ್ಟೆಯಿಂದ ಮುಖ ಮರೆ ಮಾಡಿರದೆ ಸಂಪ್ರದಾಯ ಬಾಹಿರರಾಗಿ ಉಳಿಯುವುದರಿಂದ ಉಂಟಾಗುವ ಜಿಗುಪ್ಸೆಗೆ ಇದೊಂದು ನಿದರ್ಶನವಾಗಿತ್ತು.

"ಹೆಂಗಸು...." ಆಹ್‌ಕ್ಯೂ ಆಲೋಚಿಸಿದ. ಪುರುಷರನ್ನು ಮರುಳುಗೊಳಿಸುವ ಹೆಂಗಸರ ಮೇಲೆ ಕಣ್ಣಿಟ್ಟಿದ್ದ. ತನ್ನೊಂದಿಗೆ ಮಾತನಾಡುವ ಹೆಂಗಸರನ್ನು ಜಾಗರೂಕತೆಯಿಂದ ಗಮನಿಸುತ್ತಿದ್ದ. ಆದರೆ ಯಾರೊಬ್ಬರೂ ಗುಪ್ತ ಪ್ರಣಯಕ್ಕೆ ಸಂಬಂಧ ಪಟ್ಟ ಏನನ್ನೂ ಮಾತಾಡಲಿಲ್ಲ. ಆಹಾ! ಸಂಪ್ರದಾಯ ಬಾಹಿರ ಹೆಂಗಸರಿಗೊಂದು ನಿದರ್ಶನ! ಎಲ್ಲರೂ ಸೋಗಿನ ಮರ್ಯಾದೆಯನ್ನು ಧರಿಸಿದ್ದರು.

ಒಂದು ದಿನ ಆಹ್‌ಕ್ಯೂ, ಚಾವೋನ ಮನೆಯಲ್ಲಿ ಅಕ್ಕಿ ಬೀಸುತ್ತಿದ್ದ. ರಾತ್ರಿ ಊಟ ಆದ ಮೇಲೆ ಪೈಪ್ ಸೇದಲೆಂದು ಅಡಿಗೆ ಮನೆಯಲ್ಲಿ ಕುಳಿತಿದ್ದ. ಬೇರೆಯವರ ಮನೆ ಆಗಿದ್ದರೆ, ರಾತ್ರಿ ಊಟದ ನಂತರ ಮನೆಗೆ ಹೊರಟು ಬಿಡುತ್ತಿದ್ದ. ಚಾವೋನ ಮನೆಯಲ್ಲಿ ರಾತ್ರಿಯೂಟ ಬೇಗನೇ ಮುಗಿದಿತ್ತು. ಸಾಮಾನ್ಯವಾಗಿ ಊಟ ಮುಗಿದ ತಕ್ಷಣ, ದೀಪ ಹಚ್ಚಬಾರದು. ಎಲ್ಲ ಹೋಗಿ ಮಲಗಬೇಕು ಅನ್ನೋ ನಿಯಮ ಇತ್ತು. ಆದರೂ

ಒಮ್ಮೊಮ್ಮೆ ಈ ನಿಯಮವನ್ನು ಮೀರುವ ಸಂದರ್ಭಗಳು ಇರುತ್ತಿದ್ದವು. ಚಾವೋನ ಮಗ ಪಬ್ಲಿಕ್ ಪರೀಕ್ಷೆಗೆ ಓದಬೇಕಾಗಿದ್ದುದರಿಂದ ಅವನು ದೀಪ ಹಚ್ಚಲು ಪರವಾನಗಿ ಇತ್ತು. ಒಮ್ಮೊಮ್ಮೆ ಆಹ್‌ಕ್ಯೂಗೂ ಏನಾದರೂ ಸಣ್ಣ ಪುಟ್ಟ ಕೆಲಸಗಳನ್ನು ಮಾಡಬೇಕಾಗಿ ಬಂದಾಗ, ದೀಪ ಹಚ್ಚಬಹುದಾಗಿತ್ತು. ಇಂತಹ ಅಪವಾದಗಳಿಂದಾಗಿ ಆಹ್‌ಕ್ಯೂ ಅಡಿಗೆ ಮನೆಯಲ್ಲಿ, ತನ್ನ ಕೆಲಸ ಮುಂದುವರೆಸುವುದಕ್ಕೆ ಮೊದಲು ಪೈಪ್ ಸೇದಲು ಕುಳಿತ.

ಆಗ ಚಾವೋ ಮನೆಯ ಕೆಲಸದವಳು ಅಮಾಹ್‌ವೂ ಪಾತ್ರೆ ತೊಳೆದು ಇಟ್ಟ ಮೇಲೆ, ಅಲ್ಲಿಯೇ ಇದ್ದ ಬೆಂಚಿನ ಮೇಲೆ ಕುಳಿತು ಆಹ್‌ಕ್ಯೂ ಜೊತೆಗೆ ಹರಟೆಗೆ ತೊಡಗಿದಳು.

"ನಮ್ಮೊಡತಿ ಎರಡು ದಿನದಿಂದ ಏನನ್ನೂ ತಿಂದೇ ಇಲ್ಲ. ಯಾಕೇಂದ್ರೆ ಯಜಮಾನ್ರು ಸೂಳೇನ ತಂದು ಇರಿಸ್ಕೋತಾರಂತೆ!...."

"ಹೆಂಗಸು! ಅಮಾಹ್‌ವೂ... ಈ ಎಳೆ ವಿಧವೆ...." ಆಹ್‌ಕ್ಯೂ ಯೋಚಿಸಿದ.

"ನಮ್ಮ ಚಿಕ್ಕೊಡತಿ ಐನೇ ತಿಂಗಳಲ್ಲಿ ಒಂದು ಮಗು ಹಡೀತಾರೆ...."

"ಹೆಂಗಸು...." ಆಹ್‌ಕ್ಯೂ ಯೋಚಿಸಿದ.

ಪೈಪನ್ನು ಕೆಳಗಿರಿಸಿ ಎದ್ದುನಿಂತ.

"ನಮ್ಮ ಚಿಕ್ಕೊಡತಿ... ಅಮಾಹ್‌ವೂ ವಟಗುಟ್ಟಿದಳು. "ನಂಜೊತೆ ಮಲಗು!" ಇದ್ದಕ್ಕಿದ್ದಂತೆ ಆಹ್‌ಕ್ಯೂ ಮುನ್ನುಗ್ಗಿ ಹೋಗಿ ಅವಳ ಪಾದಗಳ ಬಳಿ ಬಿದ್ದ.

ಒಂದು ಕ್ಷಣ ನಿಸ್ತಬ್ಧ.

"ಅಯ್ಯೋ!" ದಿಗ್ಭ್ರಮೆಯಿಂದ ಒಂದು ಕ್ಷಣ ಮೂಕಳಾದಳು. ನಡುಗಲು ಪ್ರಾರಂಭಿಸಿದಳು. ನಂತರ ಅವನಿಂದ ತಪ್ಪಿಸಿಕೊಳ್ಳುತ್ತಾ, ಕಿರುಚುತ್ತಾ ಓಡಿದಳು. ಸ್ವಲ್ಪ ಹೊತ್ತಿನ ನಂತರ ಬಿಕ್ಕಿ ಬಿಕ್ಕಿ ಅಳುವುದು ಕೇಳಿಸಿತು.

ಆಹ್‌ಕ್ಯೂ ಕೂಡ ಗೋಡೆಗೆ ಒರಗಿ ಮೂಕ ವಿಸ್ಮಿತನಾಗಿ ಮೊಣಕಾಲೂರಿ ಕುಳಿತಿದ್ದ. ಖಾಲಿಯಾಗಿದ್ದ ಬೆಂಚನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡು ಮೆಲ್ಲನೆ ಎದ್ದು ನಿಂತ. ಏನೋ ಅಚಾತುರ್ಯ ಆಗಿರುವುದು ಅಸ್ಪಷ್ಟವಾಗಿ ಗೋಚರಿಸಿತು. ಹಾಗೆ ನೋಡಿದರೆ ಅವನೇ ಬಹಳ ಹೆದರಿದ್ದ. ಆತುರಾತುರವಾಗಿ ಪೈಪನ್ನು ಸೊಂಟಕ್ಕೆ ಸಿಕ್ಕಿಸಿ, ಮತ್ತೆ ಅಕ್ಕಿ ಬಳಿಗೆ ಹೋಗಲು

ನಿರ್ಧರಿಸಿದ. ಆದರೆ... ತಕ್ಷಣ ಅವನ ತಲೆಮೇಲೆ ಬಲವಾಗಿ ಒಂದು ಗುದ್ದು ಬಿತ್ತು. ಸರ್ರನೆ, ತನ್ನನ್ನು ಹೊಡೆದ ವ್ಯಕ್ತಿಯಾರೆಂದು ತಿರುಗಿ ನೋಡಿದ. ಕೈಯಲ್ಲಿ ಬೆತ್ತದ ಕೋಲು ಹಿಡಿದು ಯಶಸ್ವಿ ರಾಜಕೀಯ ಅಭ್ಯರ್ಥಿ ನಿಂತಿದ್ದ.

"ನೀನು... ನೀನು... ನಿನಗೆಷ್ಟೋ ಧೈರ್ಯ? ದಪ್ಪನೆಯ ಬೆತ್ತ ಆಹ್‌ಕ್ಯೂನ ಭುಜಗಳ ಮೇಲೆ ಬಿತ್ತು. ತಲೆ ಮೇಲಿನ ಹೊಡೆತ ತಪ್ಪಿಸಿಕೊಳ್ಳಲು ಕೈಗಳನ್ನು ಮೇಲೆತ್ತಿ ಇಟ್ಟಾಗ ಅವನ ಗೆಣ್ಣುಗಳ ಮೇಲೆ ಏಟು ಬಿತ್ತು. ಅದರಿಂದಾಗಿ ವಿಪರೀತ ನೋವುಂಟಾಯಿತು. ಅಡಿಗೆ ಮನೆಯಿಂದ ತಪ್ಪಿಸಿಕೊಂಡು ಓಡುವ ಭರದಲ್ಲಿ ಅವನ ಬೆನ್ನಿಗೂ ಏಟು ಬಿದ್ದಹಾಗಿತ್ತು.

"ಆಮೆ ಮೊಟ್ಟೆ" - ಹೊಡೆದವನು ಆಹ್‌ಕ್ಯೂನನ್ನು ಶಪಿಸುತ್ತಾ ನಜ್ಜುಗುಜ್ಜಾಗುವಂತೆ ಬಾರಿಸಿದ. ಓಡಿ ಹೋಗಿ ಒಂದುಕಡೆ ಒಂಟಿಯಾಗಿ ನಿಂತ. ಅವನ ಗೆಣ್ಣುಗಳು ನೋಯುತ್ತಿದ್ದವು. ಅದಕ್ಕಿಂತ ಆಮೆಮೊಟ್ಟೆ ಅನ್ನುವ ಪದ ಅವನನ್ನು ಹೆಚ್ಚು ನೋಯಿಸಿತ್ತು. ವೀಷುವಾಂಗ್‌ನಲ್ಲಿ ಯಾರೂ ಆ ಪದವನ್ನು ಬಳಸುತ್ತಿರಲಿಲ್ಲ. ಕೇವಲ ಶ್ರೀಮಂತರು ಅಧಿಕಾರದಲ್ಲಿ ಇರುವವರು ಮಾತ್ರ ಇದನ್ನು ಬಳಸುತ್ತಿದ್ದರು. ಅವನಿಗೆ ಇದರಿಂದ ತುಂಬ ಹೆದರಿಕೆಯಾಗಿತ್ತು. ಅವನ ಮನಸ್ಸಿನ ಮೇಲೆ ತುಂಬಾ ಪರಿಣಾಮ ಬೀರಿತ್ತು. ಇಷ್ಟು ಹೊತ್ತಿಗೆ ಅವನ ತಲೆಯಿಂದ ಹೆಂಗಸು ವಿಚಾರ ಹಾರಿ ಹೋಗಿತ್ತು. ಈ ಬೈಗಳು, ಹೊಡೆತ ಎಲ್ಲ ಮುಗಿದ ಮೇಲೆ, ಏನೋ ಮುಗೀತು ಅಂತ ಅನ್ನಿಸಿ ನಿರಾಳವಾಗಿ ಅಕ್ಕಿಯನ್ನು ಬೀಸತೊಡಗಿದ. ಸ್ವಲ್ಪ ಹೊತ್ತು ಮಾಡಿದ ಮೇಲೆ ಸೆಕೆ ಅಂತ ಅನಿಸಿ, ಅಂಗಿಯನ್ನು ಬಿಚ್ಚಿದ.

ಅಂಗಿ ಬಿಚ್ಚುತ್ತಿರುವಾಗ ಹೊರಗಡೆಯಿಂದ ದೊಡ್ಡ ಗದ್ದಲ ಕೇಳಿಸಿತು. ಆಹ್‌ಕ್ಯೂಗೆ ಯಾವಾಗಲೂ ಇಂತಹ ಜಗಳ, ಕೂಗು ನೋಡುವುದೆಂದರೆ ಒಂದು ಥರಾ ಉತ್ಸಾಹ ಇರುತ್ತಿದ್ದುದರಿಂದ ಈಗಲೂ ಆ ಸದ್ದು ಕೇಳಿದ ದಿಕ್ಕನ್ನು ಹುಡುಕಿ ಹೊರಟ. ಕಡೆಗೆ ಚಾವೋನ ಒಳಾಂಗಣದಿಂದ ಎಂಬುದನ್ನು ಪತ್ತೆ ಹಚ್ಚಿದ. ಮುಸ್ಸಂಜೆ ಆಗಿದ್ದರೂ ಸಾಕಷ್ಟು ಜನ ಸೇರಿದ್ದನ್ನು ನೋಡಿದ. ಚಾವೋ ಕುಟುಂಬದವರೆಲ್ಲರೂ ಜೊತೆಗೆ ಎರಡು ದಿನದಿಂದ ಊಟ ಮಾಡದಿದ್ದ ಚಾವೋನ ಹೆಂಡತಿ ಕೂಡ ಇದ್ದರು. ಜೊತೆಗೆ ನೆರೆ ಹೊರೆಯವರಾದ ಶ್ರೀಮತಿ ತ್ಸುವೋ ಮತ್ತು ನೆಂಟರಾದ ಚಾವೋ ಪೇ ಎನ್ ಮತ್ತು ಚಾವೋ ಷು ಚೆನ್ ರೂ ಇದ್ದರು.ಚಿಕ್ಕೊಡತಿ ಅಮಾಹ್ ವೂ ಳನ್ನು ಕೆಲಸದವರ ಕ್ವಾರ್ಟರ್ಸ್‌ನಿಂದ ಎಳೆದು ತಂದು ಹೇಳ ತೊಡಗಿದಳು.

"ಆಚೆ ಬಾ..... ನಿನ್ನ ರೂಮಲ್ಲಿ ಕೂತ್ಕೊಂಡು ಯೋಚನೆ ಮಾಡ್ತಿರಬೇಡ".

"ಎಲ್ಲರಿಗೂ ಗೊತ್ತು. ನೀನು ಒಳ್ಳೆ ಹೆಂಗಸೂಂತ"

ಶ್ರೀಮತಿ ತ್ಸುವೋ ಪಕ್ಕದಿಂದ ಹೇಳಿದಳು. ಆತ್ಮಹತ್ಯೆ ಮಾಡಿಕೊಳ್ಳೋ ಯೋಚನೆ ಮಾಡಬಾರದು.

ಅಮಾಹ್ ನರಳಿದಳು. ಯಾರಿಗೂ ಕೇಳಿಸದಂತೆ ಅಸ್ಪಷ್ಟವಾಗಿ ಏನನ್ನೋ ಗೊಣಗಿದಳು.

"ಬಹಳ ಕುತೂಹಲಕರವಾಗಿದೆ" ಆಹ್‌ಕ್ಯೂ ಹೇಳಿಕೊಂಡ. ಏನು ತಲೆಹರಟೆ ಮಾಡೋಕೆ ಹೊರಟಿದ್ದಾಳೆ, ಈ ಚಿಕ್ಕ ವಿಧವೆ. ಅವನಿಗೆ ಏನೂಂತ ತಿಳಿಯುವ ಕುತೂಹಲ. ಚಾವೋ ಷೂ ಚೆನ್ ಬಳಿಗೆ ಸಾರುತ್ತಿದ್ದಂತೆ, ಚಾವೋನ ಹಿರಿಯ ಮಗ ಬಿದಿರಿನ ಕೋಲು ಹಿಡಿದುಕೊಂಡು ಬರುತ್ತಿದ್ದುದು ಕಾಣಿಸಿತು. ಅದನ್ನು ನೋಡುತ್ತಿದ್ದಂತೆ ಅದರಿಂದ ಏಟು ತಿಂದದ್ದು ನೆನಪೂ ಆಯಿತು. ಈಗ ಇಲ್ಲಿ ನಡೀತಿರೊ ಘಟನೆ ಜೊತೆ ತನ್ನದೂ ಏನೋ ಸಂಬಂಧ ಇರಬೇಕು ಅನಿಸಿ, ಅಲ್ಲಿಂದ ತಪ್ಪಿಸಿಕೊಂಡು, ಕೋಲು ತನ್ನನ್ನು ಹಿಂಬಾಲಿಸಿ ತಡೆಯುತ್ತೆ ಅನ್ನುವ ಅರಿವಿಲ್ಲದೆ ಓಡಿದ. ಕೋಲು ಹಿಂಬಾಲಿಸಲು ವಿರುದ್ಧ ದಿಕ್ಕಿಗೆ ಹೊರಳಿದ ಸ್ವಲ್ಪ ಹೊತ್ತಿನಲ್ಲಿಯೇ ತನ್ನ ರಕ್ಷಕ ದೇವರ ಗುಡಿಯಲ್ಲಿದ್ದ.

ಸ್ವಲ್ಪ ಹೊತ್ತು ಕುಳಿತಾದ ಮೇಲೆ, ಅವನ ಚರ್ಮದಲ್ಲಿ ಚಳಿಗುಳ್ಳೆ ಕಾಣಿಸಿದವು. ವಸಂತ ಮಾಸವೇ ಆಗಿದ್ದರೂ ರಾತ್ರಿಗಳು ಮಂಜಿನಿಂದ ಕೂಡಿರುತ್ತಿದ್ದುದರಿಂದ ಬರಿ ಮೈಯಲ್ಲಿ ಮಲಗುವುದು ಸಾಧ್ಯವಿರಲಿಲ್ಲ. ಅಂಗಿಯನ್ನು ಚಾವೋನ ಮನೆಯಲ್ಲಿ ಬಿಟ್ಟದ್ದು ನೆನಪಾಯಿತು. ಆದರೆ ಹೋಗುವುದಕ್ಕೆ ಹೆದರಿಕೆ. ಹೋದರೆ ಮತ್ತೊಮ್ಮೆ ಕೋಲಿನೇಟಿನ ರುಚಿ ನೋಡಬೇಕಾಗುತ್ತದೆ ಎನಿಸಿತು.

ಆಗ ದಂಡಾಧಿಕಾರಿ ಒಳಗೆ ಬಂದ. "ಹಾಳಾಗಿ ಹೋಗು ಆಹ್‌ಕ್ಯೂ. ಚಾವೋ ಮನೆಯ ಕೆಲಸದವರನ್ನೂ ಬಿಡೋದಿಲ್ಲ ಅಲ್ವ? ದುಷ್ಟ! ನನಗೆ ನಿದ್ದೆ ಇಲ್ದೆ ಇರೋ ಹಾಗೆ ಮಾಡಿದೆ.... ನೀನು..."

ಒಂದೇ ಸಮನೆ ಬೀಳುತ್ತಿದ್ದ ಬೈಗುಳ ಎದುರು ಆಹ್‌ಕ್ಯೂಗೆ ಏನೂ ಹೇಳಲಾಗಲಿಲ್ಲ. ಕೊನೆಗೆ, ರಾತ್ರಿ ಹೊತ್ತಾದ್ದರಿಂದ ಒಂದಕ್ಕೆ ಎರಡರಂತೆ ನಾಲ್ಕುನೂರು ನಾಣ್ಯಗಳನ್ನು ದಂಡವಾಗಿ ತೆರಬೇಕಾಯಿತು. ಆದರೆ ಅವನ ಬಳಿ ನಗದು ಹಣ ಇರಲಿಲ್ಲವಾದ

ಕಾರಣ ತನ್ನ ಹ್ಯಾಟನ್ನು ಭದ್ರತೆಯಾಗಿರಿಸಿದ. ಜೊತೆಗೆ ಕೆಳಗೆ ಸೂಚಿಸಿರುವ ಷರತ್ತುಗಳಿಗೆ ಒಪ್ಪಿಕೊಳ್ಳಬೇಕಾಯಿತು :-

೧. ತಾನು ಮಾಡಿದ ಅಪರಾಧಕ್ಕಾಗಿ, ಆಹ್‌ಕ್ಯೂ ಮರುದಿನ ಬೆಳಿಗ್ಗೆ ಒಂದು ಪೌಂಡ್ ತೂಕದ ಒಂದು ಜೊತೆ ಕ್ಯಾಂಡೆಲ್‌ಗಳನ್ನು, ಒಂದು ಕಟ್ಟು ಧೂಪದಕಡ್ಡಿಯನ್ನು ಚಾವೋ ಕುಟುಂಬಕ್ಕೆ ತೆಗೆದುಕೊಂಡು ಹೋಗಿ, ಪರಿಹಾರ ರೂಪವಾಗಿ ನೀಡಬೇಕು.

೨. ಆಹ್‌ಕ್ಯೂ ಚೋವೋ ಪುರೋಹಿತರಿಗೆ ಚಾವೋನ ಮನೆಯ ದುಷ್ಟ ಶಕ್ತಿಗಳನ್ನು ನಿವಾರಿಸಲು ಕರೆಸಿದ್ದರಿಂದ, ಸಂಭಾವನೆಯನ್ನು ಕೊಡಬೇಕು.

೩. ಇನ್ನು ಮುಂದೆ ಆಹ್‌ಕ್ಯೂ ಚಾವೋನ ಮನೆಗೆ ಕಾಲಿಡಕೂಡದು.

೪. ಅಮಾಹ್‌ವೂಗೆ ಏನಾದರೂ ಹೆಚ್ಚು ಕಡಿಮೆಯಾದರೆ, ಅದಕ್ಕೆ ಆಹ್‌ಕ್ಯೂನನ್ನೇ ಹೊಣೆ ಎಂದು ಪರಿಗಣಿಸಲಾಗುವುದು.

೫. ಆಹ್‌ಕ್ಯೂ ತನ್ನ ಸಂಬಳಕ್ಕಾಗಲೀ, ಅಂಗಿಗಾಗಲೀ ಆ ಮನೆಗೆ ಹೋಗಬಾರದು.

ಆಹ್‌ಕ್ಯೂ ಎಲ್ಲ ಷರತ್ತುಗಳಿಗೆ ಒಪ್ಪಿಕೊಂಡ. ಆದರೆ ಪಾಪ! ಅವನಲ್ಲಿ ಆ ಸಮಯಕ್ಕೆ ಹಣ ಇರಲಿಲ್ಲ. ಅದೃಷ್ಟಕ್ಕೆ ವಸಂತ ಋತು ಆದಾಗಿತ್ತು. ತನ್ನ ಮೆತ್ತನೆಯ ತುಪ್ಪಳದ ಹೊದಿಕೆಯನ್ನು ಎರಡು ಸಾವಿರಕ್ಕೆ, ಮೇಲಿನ ಷರತ್ತುಗಳನ್ನು ಪೂರೈಸಲು ಅಡ ಇಟ್ಟ. ಹಾಕಿಕೊಳ್ಳಲು ಏನೂ ಇಲ್ಲದಿರುವುದನ್ನು ತಿಳಿದೂ ತನ್ನಲ್ಲಿ ಇನ್ನೂ ಉಳಿದಿದ್ದ ಹಣದಿಂದ ತನ್ನ ಹ್ಯಾಟನ್ನು ದಂಡಾಧಿಕಾರಿಯಿಂದ ಬಿಡಿಸಿಕೊಳ್ಳುವುದು ಬಿಟ್ಟು ಹೆಂಡಕ್ಕಾಗಿ ಖರ್ಚುಮಾಡಿದ.

ಚಾವೋ ಮನೆಯಲ್ಲಿ ಧೂಪದ ಕಡ್ಡಿಯನ್ನಾಗಲೀ, ಕ್ಯಾಂಡಲ್‌ಗಳನ್ನಾಗಲೀ ಹಚ್ಚುತ್ತಿರಲಿಲ್ಲ. ಏನಿದ್ದರೂ ಮನೆಯೊಡತಿಯೊಬ್ಬರು ಯಾವಾಗಲಾದರೂ ಬುದ್ಧನ ಮುಂದೆ ಇವುಗಳನ್ನು ಉರಿಸುತ್ತಿದ್ದಳು. ಅದಕ್ಕೆಂದ ಇವುಗಳನ್ನು ತೆಗೆದು ಪಕ್ಕದಲ್ಲಿ ಇರಿಸಲಾಗಿತ್ತು. ಹರಿದ ಅಂಗಿಯನ್ನು ಹುಟ್ಟಿದ ಮಗುವಿನ ಕೆಳಗೆ ಹಾಕಲು ಉಪಯೋಗಿಸಲಾಗಿತ್ತು. ಇನ್ನು ಉಳಿದ ಹರಕು ಚಿಂದಿಗಳನ್ನು ಬೂಟಿನ ತಳಭಾಗಕ್ಕೆಂದು ಅಮಾಹ್‌ವೂ ಉಪಯೋಗಿಸಿದಳು.

## ಅಧ್ಯಾಯ - ೫

## ಬದುಕಿನ ಸಮಸ್ಯೆ

ಚಾವೋ ಕುಟುಂಬದ ಷರತ್ತುಗಳನ್ನು ಒಪ್ಪಿ ನಡೆದುಕೊಂಡಮೇಲೆ ತನ್ನ ರಕ್ಷಕ ದೇವರ ಗುಡಿಗೆ ಹೋದ. ಸೂರ್ಯ ಮುಳುಗಿದ್ದ. ಅವನಿಗೆ ಏನೋ ಕೆಟ್ಟದ್ದಾಗಬಹುದೆಂಬ ವಿಚಾರ ಮೂಡುತ್ತಿತ್ತು. ಬೆನ್ನು ಬೆತ್ತಲೆಯಾಗಿರುವುದರಿಂದ ಈ ರೀತಿಯ ಆಲೋಚನೆ ಬಂದಿರಬಹುದು ಎಂದುಕೊಂಡ. ಹರಕಲು ಜಾಕೆಟ್ಟ ಇದ್ದುದು ನೆನಪಾಗಿ, ತೆಗೆದು ಹಾಸಿಕೊಂಡು ಮೈಚಾಚಿದ. ಕಣ್ಣು ಬಿಟ್ಟಾಗ ಸೂರ್ಯ ಪಶ್ಚಿಮ ಗೋಡೆಯ ಮೇಲೆ ಹೊಳೆಯುತ್ತಿದ್ದ. ಎದ್ದು ಕುಳಿತ. ಹಾಳಾಗಲಿ- ಎಂದ.

ಎದ್ದು ಮಾಮೂಲಿನಂತೆ ಬೀದಿಗಳಲ್ಲಿ ಅಲೆದಾಡಿದ. ಏನೋ ಹಿಂಸೆ ಎನಿಸುತ್ತಿತ್ತು. ಆದರೆ ಈಗ ಈ ಹಿಂಸೆ ದೇಹಕ್ಕೆ ಸಂಬಂಧಿಸಿದ್ದಲ್ಲ. ಬೆನ್ನಿಗೆ ಏನೂ ಇಲ್ಲವಾಗಿ ಚಳಿಯಾಗಿತ್ತು. ಅವತ್ತಿನಿಂದ ಹೆಂಗಸರು ಆಹ್‌ಕ್ಯೂ ಕಣ್ಣಿಗೆ ಬಿದ್ದೊಡನೆ ನಾಚುತ್ತಿದ್ದರು. ಮೆಲ್ಲಗೆ ಸರಿದು ಮರೆಯಾಗುತ್ತಿದ್ದರು. ಕಡೆಗೆ ಐವತ್ತು ವರ್ಷದ ಶ್ರೀಮತಿ ತ್ಸುವೋ ಕೂಡ ಏನು ಮಾಡಬೇಕೆಂದು ತೋಚದೆ, ತನ್ನ ಹನ್ನೊಂದು ವರ್ಷದ ಮಗಳನ್ನು ಒಳಗೆ ಹೋಗುವಂತೆ ಹೇಳಿ ತಾನೂ ಒಳಗೆ ಮರೆಯಾದಳು. ಆಹ್‌ಕ್ಯೂಗೆ ಇದು ವಿಚಿತ್ರವಾಗಿ ಕಾಣಿಸಿತು. ಹಾಳು ಮುಂಡೇವು! ಎಂದುಕೊಂಡ. "ಇದ್ದಕ್ಕಿದ್ದ ಹಾಗೆ ಇವರೆಲ್ಲ ಯುವತಿಯರ ಹಾಗೆ ನಾಚಿಕೊಳ್ಳೋಕೆ ಹೊರಟಿದ್ದಾರೆ!....."

ಇನ್ನೂ ಕೆಲವು ದಿವಸಗಳಾದ ಮೇಲೆ ಅವನಿಗೆ ಯಾಕೋ, ಏನೋ ಆಗಿದೆ- ಅಂತ ಅನಿಸತೊಡಗಿತು. ಹೆಂಡದಂಗಡಿಯವನು ಸಾಲ ಕೊಡೋದು ನಿಲ್ಲಿಸಿಬಿಟ್ಟ. ಗುಡಿಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮುದುಕ ಏನೇನೋ ಕೆಟ್ಟದ್ದನ್ನು ಮಾತಾಡಿದ, ಆಹ್‌ಕ್ಯೂ ನನ್ನು ಅಲ್ಲಿಂದ ಕಳಿಸುವ ಉದ್ದೇಶವಿತ್ತು. ಮೂರನೆಯದಾಗಿ ಇತ್ತೀಚೆಗೆ ಕೆಲವು ದಿನಗಳಿಂದ ಯಾರೂ ತನ್ನನ್ನು ಕೆಲಸಕ್ಕೆ ಕರೆಯಲಿಲ್ಲ. ಹೆಂಡದವನು ಸಾಲಕೊಡದಿದ್ದರೂ ನಡೆಯುತ್ತೆ. ಮುದುಕ ಏನೆ ಬೈದರೂ ತಾನೇನೂ ಲಕ್ಷ್ಯ ಕೊಡಬೇಕಾದ್ದಿಲ್ಲ. ಆದರೆ ಯಾರೂ ಕೆಲಸ ಕೊಡದಿದ್ದರೆ ಹೊಟ್ಟೆ ತುಂಬೋದು ಹೇಗೆ? ಉಪವಾಸ ಇರಬೇಕಾಗುತ್ತೆ. ನಿಜವಾಗಿಯೂ ತನ್ನದು ದರಿದ್ರ ಸ್ಥಿತಿಯಾಗಿತ್ತು.

ಇನ್ನು ಅವನಿಂದ ಇರೋಕೆ ಆಗಲಿಲ್ಲ. ತಾನು ಮಾಮೂಲಾಗಿ ಹೋಗುತ್ತಿದ್ದ ಮನೆಗಳಿಗೆ ಹೋಗಿ, ತನ್ನನ್ನು ಕರೆಯದಿರಲು ಕಾರಣ ಏನೂಂತ ತಿಳ್ಕೋಬೇಕೂಂತ

ಪ್ರಯತ್ನಿಸಿದ. ಚಾವ್ರೋ ಒಬ್ಬರ ಮನೆಯಲ್ಲಿ ಅವನಿಗೆ ಪ್ರವೇಶ ಸಿಗಲಿಲ್ಲ. ತನಗೆ ಎದುರಾದ ಒಬ್ಬ ವ್ಯಕ್ತಿ ಬಾಗಿಲಿಂದಲೇ ಸಿಟ್ಟಿನಿಂದ ಆಹ್‌ಕ್ಯೂನನ್ನು "ಹೋಗು ಹೋಗು! ಇಲ್ಲಿ ಏನೂ ಇಲ್ಲ" ಅಂತ ಹೇಳಿ ಭಕ್ಷುಕರನ್ನು ಓಡಿಸುವ ಹಾಗೆ ಓಡಿಸಿದ.

ಆಹ್‌ಕ್ಯೂಗೆ ಇದು ತೀರ ವಿಶೇಷ ಎನಿಸಿತು. ಇವರಿಗೆ ಸಹಾಯ ಬೇಕಾದಾಗಲೆಲ್ಲ ನಾನು ಬೇಕಿದ್ದೆ. ಇದ್ದಕ್ಕಿದ್ದಂತೆ ಹೀಗೆಲ್ಲ ಮಾಡೋದೂಂದ್ರೆ! ಏನೋ ಇರಬೇಕು! ಎಂದುಕೊಂಡ. ಆಮೇಲೆ ಅವನಿಗೆ ಗೊತ್ತಾಯಿತು. ಸಣ್ಣಪುಟ್ಟ ಕೆಲಸಗಳಿಗೆ ಯಂಗ್‌ಡಿಯನ್ನು ಕರೆಯುತ್ತಿದ್ದರು. ಆಹ್‌ಕ್ಯೂ ದೃಷ್ಟಿಯಲ್ಲಿ ಈ ಯಂಗ್‌ಡಿ ಬಹಳ ಕೃಶನಾದವನು, ಯಾತಕ್ಕೂ ಪ್ರಯೋಜನವಿಲ್ಲದವನು, ವಿಸ್ಕರ್ಸ್‌ವ್ಯಾಂಗ್‌ಗಿಂತಲೂ ಕಡೆ. ಆದರೂ ಯಾರು ತಾನೇ ಊಹಿಸಿದ್ದರು, ಇಂಥವನು ತನ್ನ ಹೊಟ್ಟೆ ಮೇಲೆ ಹೊಡೀತಾನೆ ಅಂತ? ಈ ಸಲ ಆಹ್‌ಕ್ಯೂನ ತಿರಸ್ಕಾರ ಧೋರಣೆ ಮಾಮೂಲಿಗಿಂತ ಹೆಚ್ಚಾಗಿತ್ತು. ತನ್ನ ರೀತಿಯಲ್ಲಿ ಹೆಜ್ಜೆ ಹಾಕುತ್ತಾ, ಸಿಟ್ಟಿನಿಂದ ಬುಸುಗುಡುತ್ತಾ, ಇದ್ದಕ್ಕಿದ್ದಂತೆ "ಉಕ್ಕಿನ ಕೋಲಿನಿಂದ ನಿನ್ನನ್ನು ಚುಚ್ಚುವೆನು" ಎಂದು ಗುಣುಗುಣಿಸುತ್ತಾ ಸಾಗಿದ.

ಕೆಲವು ದಿನಗಳ ತರುವಾಯ ಮಿಸ್ಟರ್ ಚಿಯೆನ್‌ನ ಮನೆಯ ಮುಂದೆ ಆಹ್‌ಕ್ಯೂ ಯಂಗ್‌ಡಿಯನ್ನು ಭೇಟಿಯಾದ. ಇಬ್ಬರು ಶತ್ರುಗಳು ಮುಖಾಮುಖಿಯಾದಾಗ ಕಣ್ಣುಗಳು ಕೆಂಡ ಸುರಿದವು. ಯಂಗ್‌ಡಿ ಸುಮ್ಮನೆ ನಿಂತಿದ್ದ.

"ಮೂರ್ಖ ಕತ್ತೆ!" ದುರು ದುರುನೆ ನೋಡುತ್ತಾ, ಬಾಯಿಯ ಬಳಿ ನೊರೆ ಕಾರುತ್ತ ಕೂಗಿದ.

"ನಾನೊಂದು ಕೀಟ... ಆಯ್ತು?" - ಯಂಗ್‌ಡಿ ಕೇಳಿದ. ಅವನ ವಿನಯ ಆಹ್‌ಕ್ಯೂನನ್ನು ಮತ್ತಷ್ಟು ರೇಗಿಸಿತು. ಹೊಡೆಯಲು ಅವನ ಕೈಯ್ಯಲ್ಲಿ ಉಕ್ಕಿನ ಕೋಲು ಇರಲಿಲ್ಲ. ತನ್ನೆರಡು ಕೈಗಳನ್ನು ಚಾಚಿ ಮುಂದಕ್ಕೆ ಹೋಗಿ ಅವನ ಜುಟ್ಟನ್ನು ಹಿಡಿದ. ಯಂಗ್‌ಡಿ ಒಂದು ಕೈಯಿಂದ ತನ್ನ ಜುಟ್ಟನ್ನು ಬಿಡಿಸಿಕೊಳ್ಳು ಪ್ರಯತ್ನಿಸುತ್ತಲೇ ಇನ್ನೊಂದು ಕೈಯನ್ನು ಆಹ್‌ಕ್ಯೂನ ಜುಟ್ಟಿಗೆ ಇರಿಸಿದ. ಆಹ್‌ಕ್ಯೂ ಕೂಡಾ ತನ್ನ ಜುಟ್ಟು ಬಿಡಿಸಿಕೊಳ್ಳಲು ಕೈಯನ್ನು ಹಾಕಿದ. ಹಿಂದೆ ಆಗಿದ್ದರೆ, ಯಂಗ್‌ಡಿಯನ್ನು ಆಹ್‌ಕ್ಯೂ ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಈಗ ಒಂದೆರಡು ದಿನಗಳಿಂದ ಉಪವಾಸ ಇದ್ದುದರಿಂದ ತನ್ನ ವಿರೋಧಿ ಇರುವಷ್ಟೇ ಸಣಕಲಾಗಿ, ದುರ್ಬಲನಾಗಿ ಇದ್ದ. ಆದ್ದರಿಂದಲೇ ಇಬ್ಬರೂ ಸಮಾಸಮ ಹೋರಾಡುವಂತೆ ಕಣಿಸಿತು. ನಾಲ್ಕು ಕೈಗಳು

ಎರಡು ತಲೆಗಳನ್ನು ಹಿಡಿದಿದ್ದವು. ಸೊಂಟದ ಬಳಿ ಬಾಗಿದ್ದರು. ಇದು ಚಿಯೆನ್ ಮನೆಯ ಬಿಳಿ ಗೋಡೆಮೇಲೆ ಇಂದ್ರಧನುಸ್ಸಿನ ರೀತಿಯಲ್ಲಿ ಬಾಗಿದ ನೆರಳನ್ನು ಮೂಡಿಸಿತು.

"ಸರಿ! ಸರಿ!" ನೋಡುತ್ತಿದ್ದ ಕೆಲವರು ಉದ್ಗರಿಸಿದರು. ಬಹುಶಃ ಅವರಿಬ್ಬರ ನಡುವೆ ರಾಜಿ ಮಾಡಿಸುವ ಪ್ರಯತ್ನದಲ್ಲಿದ್ದಿರಬೇಕು.

"ಚೆನ್ನಾಗಿದೆ! ಚೆನ್ನಾಗಿದೆ" ಎಂದು ಮತ್ತಷ್ಟು ಮಂದಿ ಭಾವಾವೇಶದಿಂದ ಉದ್ಘರಿಸಿದರು. ಅವರ ಉದ್ಗಾರಗಳು, ಇಬ್ಬರ ನಡುವೆ ರಾಜಿ ಮಾಡಿಸಲೆಂದೋ, ಇಲ್ಲವೇ ಇಬ್ಬರನ್ನೂ ಪ್ರೋತ್ಸಾಹಿಸಲೆಂದೋ ಎನ್ನುವುದು ಮಾತ್ರ ಸ್ಪಷ್ಟವಾಗಿರಲಿಲ್ಲ.

ಇಬ್ಬರು ಸ್ಪರ್ಧಿಗಳು ಮಾತ್ರ ಇವರ ಯಾವ ಮಾತಿಗೂ ಕಿವಿಗೊಡಲಿಲ್ಲ. ಆಹ್‌ಕ್ಯೂ ಮೂರು ಹೆಜ್ಜೆ ಮುಂದೆ ಹೋದರೆ, ಯಂಗ್‌ಡಿ ಮೂರು ಹೆಜ್ಜೆ ಹಿಂದೆ ನೆಗೀತಿದ್ದ. ಹಾಗಾಗಿ ಇಬ್ಬರೂ ನಿಲ್ಲುವುದು ಸಾಧ್ಯವಿತ್ತು. ಅದೇ ರೀತಿ ಯಂಗ್‌ಡಿ ಮೂರು ಹೆಜ್ಜೆ ಮುಂದೆ ಬಂದರೆ ಆಹ್‌ಕ್ಯೂ ಹಿಂದೆ ನೆಗೀತಿದ್ದ. ಇದರಿಂದ ಮತ್ತೆ ಎದ್ದು ನಿಲ್ಲುವುದಕ್ಕೆ ಸಾಧ್ಯವಾಗುತ್ತಿತ್ತು. ಒಂದು ಅರ್ಧಗಂಟೇನೋ, ಒಂದು ಗಂಟೆನೋ, (ವೀಷುವಂಗ್‌ನಲ್ಲಿ ಗಂಟೆ ಹೊಡೆಯುವ ಗಡಿಯಾರಗಳು ಕೆಲವೇ ಇದ್ದವು) ಆದ ಮೇಲೆ ಇಬ್ಬರ ತಲೆ ಒಳಗಿಂದ ಹಬೆ ಹೊರಗೆ ಬರಲು ಶುರುವಾಯಿತು. ಕೆನ್ನೆಗಳ ಮೇಲಿಂದ ಬೆವರು ಸುರೀತಿತ್ತು. ಆಹ್‌ಕ್ಯೂ ತನ್ನ ಕೈಗಳು ಜಾರಲು ಬಿಟ್ಟ. ಅದೇ ಹೊತ್ತಿನಲ್ಲಿ ಯಂಗ್‌ಡಿನ ಕೈಗಳೂ ಕೆಳಗೆ ಜಾರಿದವು. ಇಬ್ಬರೂ ನೆಟ್ಟಗೆ ನಿಂತರು. ಒಂದೊಂದು ಹೆಜ್ಜೆ ಹಿಂದು ಹಿಂದಕ್ಕೆ ಹಾಕಿ ನಿಂತಿದ್ದ ಗುಂಪಿನ ಮಧ್ಯದಿಂದ ಹಾದು ಹೊರಗೆ ಹೊರಟರು.

"ಇನ್ನೊಮ್ಮೆ ನೋಡಿಕೊಳ್ತೇನೆ ಲೋ!" ಯಂಗ್‌ಡಿ ಹೇಳಿದ.

ಈ ಮಹಾಸಮರ ವಿಜಯದಲ್ಲಾಗಲೀ ಸೋಲಿನಲ್ಲಿಯಾಗಲೀ ಪರಿಸಮಾಪ್ತಿಯಾಗಲಿಲ್ಲ. ಪ್ರೇಕ್ಷಕರಿಗೆ ಇದರಿಂದ ತೃಪ್ತಿ ಆಯಿತೋ ಇಲ್ಲವೋ ಗೊತ್ತಿಲ್ಲ. ಯಾರೂ ಇದರ ಬಗ್ಗೆ ಏನನ್ನೂ ಅಭಿವ್ಯಕ್ತಿಸಲಿಲ್ಲ. ಆದರೂ ಯಾರೊಬ್ಬರೂ ಆಹ್‌ಕ್ಯೂನನ್ನು ಕೆಲಸಕ್ಕೆ ತೆಗೆದುಕೊಳ್ಳಲು ಮುಂದಾಗಲಿಲ್ಲ.

ಒಂದು ಬೇಸಿಗೆಯ ದಿನ ಹಿತವಾದ ಗಾಳಿ ಬೀಸಿ ಬೇಸಿಗೆ ಕಾಲದ ಸವಿಯನ್ನೂಡಿಸಿತು. ಆಹ್‌ಕ್ಯೂಗೆ ಚಳಿ ಎನಿಸಿತ್ತಾದರೂ ಹೇಗೋ ಸಾವರಿಸಿಕೊಂಡ.

ಆದರೆ ಅವನ ಚಿಂತೆಯೆಲ್ಲ ಹೊಟ್ಟೇದು. ಹತ್ತಿಯ ಮೆತ್ತನೆ ಹೊದಿಕೆ ಹಾಗೂ ಹ್ಯಾಟು ಎಲ್ಲವೂ ಈಗಾಗಲೇ ಮಾಯವಾಗಿತ್ತು. ನಂತರ ತನ್ನ ಮೃದುವಾದ ಜಾಕೆಟ್ಟನ್ನೂ ಮಾರಿಬಿಟ್ಟಿದ್ದ. ಅವನು ಹಾಕಿಕೊಂಡಿರುವ ಪ್ಯಾಂಟ್ ಬಿಟ್ಟು ಬೇರೇನೂ ಇರಲಿಲ್ಲ. ಅದನ್ನಂತು ಬಿಚ್ಚುವುದಕ್ಕೇ ಸಾಧ್ಯವಿರಲಿಲ್ಲ. ಚಿಂದಿ ಚಿಂದಿಯಾದ ಜಾಕೆಟ್ ಇತ್ತಾದರೂ ಬೂಟು ಹೊಲಿಯಲು ಬಳಸಬಹುದಾಗಿತ್ತೇ ಹೊರತು ಮತ್ತ್ಯಾವುದಕ್ಕೂ ಪ್ರಯೋಜನವಿರಲಿಲ್ಲ. ಬೀದೀಲಿ ಬಿದ್ದಿರೋ ಹಣವನ್ನಾದರೂ ತಗೊಳ್ಳೋ ಆಸೆ ಭರವಸೆ ಇತ್ತಾದರೂ ಇಲ್ಲೀವರೆಗೂ ಅದು ಸಾಧ್ಯವಾಗಿರಲಿಲ್ಲ. ಈಗಲೋ ಆಗಲೋ ಬಿದ್ದು ಹೋಗೋ ಸ್ಥಿತೀಲಿ ಇರುವ ತನ್ನ ಕೋಣೆಯಲ್ಲಿ ನಿಧಿಯೇನಾದರೂ ಸಿಗಬಾರದೇ ಎಂದುಕೊಂಡು ಹುಡುಕಾಡಿದ. ಆದರೆ ಬರೀ ಖಾಲಿ ಖಾಲಿ! ಅದಾದ ಮೇಲೆ ತನ್ನ ಆಹಾರವನ್ನು ಹುಡುಕಿ ಹೊರಡಲು ಮನಸ್ಸು ಮಾಡಿದ.

ರಸ್ತೇಲಿ ನಡೆದು ಹೋಗುತ್ತಿರಬೇಕಾದರೆ, ತನ್ನ ಪರಿಚಿತವಾದ ಹೆಂಡದಂಗಡಿ, ರೊಟ್ಟಿ ಅಂಗಡಿ ಕಾಣಿಸಿತಾದರೂ ಅವನು ಅದರ ಕಡೆ ತಲೆ ಎತ್ತಿಯೂ ನೋಡಲಿಲ್ಲ. ಅವನಿಗೆ ಬೇಕಾದ್ದು ಇದಲ್ಲ. ಹಾಗಂತ ಅವನಿಗೆ ಏನು ಬೇಕಾಗಿದೆ ಅನ್ನೋದು ಸ್ಪಷ್ಟವಿರಲಿಲ್ಲ.

ವೀಷುವಾಂಗ್ ಅಂಥ ದೊಡ್ಡ ಊರೇನೂ ಆಗಿರಲಿಲ್ಲ. ಬೇಗ ಆ ಊರನ್ನು ದಾಟಿ ಹೋದ. ಊರಾಚೆ ಹೆಚ್ಚಾಗಿ ಬತ್ತದ ಗದ್ದೆಗಳೇ ಇದ್ದವು. ಅಚ್ಚ ಹಸುರಾದ ಎಳೆತೆನೆಗಳು ಚಲಿಸುತ್ತಿರುವ ವಸ್ತುಗಳ ಜೊತೆಗೆ ಚಲಿಸುತ್ತ ತೊನೆದಾಡುತ್ತ ಇರುವಂತೆ ಕಾಣಿಸಿತು. ಆ ಕಪ್ಪು ವಸ್ತುಗಳು ಕೆಲಸಮಾಡುತ್ತಿದ್ದ ರೈತರ ತಲೆಗಳಾಗಿದ್ದವು. ಆಹ್‌ಕ್ಯೂ ತನ್ನ ಪಾಡಿಗೆ ತಾನು ಅವುಗಳನ್ನು ಹಾದು ಹೋದ. ಯಾಕೆಂದರೆ ಅವನ ಪ್ರಯಾಣದ ಉದ್ದೇಶ ಜೀವನೋಪಾಯಕ್ಕೆ ದಾರಿ ಹುಡುಕುವುದಾಗಿತ್ತು. ಕಡೆಗೆ ಕ್ವಯೆಟ್ ಆಫ್ ಸೆಲ್ಫ್ ಇಂಪ್ರೂವ್‌ಮೆಂಟ್ ಕಾನ್ವೆಂಟ್ ಬಳಿಗೆ ಬಂದ.

ಕಾನ್ವೆಂಟ್‌ನ ಸುತ್ತಲೂ ಭತ್ತದ ಗದ್ದೆಗಳೇ ಇದ್ದವು. ಹಸಿರು ಗದ್ದೆಗಳ ನಡುವೆ ಬಿಳಿ ಗೋಡೆಗಳು ಕಾಣುತ್ತಿದ್ದವು. ಒಳಗೆ ತರಕಾರಿ ತೋಟವನ್ನು ಬೆಳೆಸಿದ್ದರು. ಆಹ್‌ಕ್ಯೂ ಒಂದೆರಡು ನಿಮಿಷ ಹಿಂದು ಮುಂದು ನೋಡಿದ. ನಂತರ ಮೋಟು ಮಣ್ಣಿನ ಗೋಡೆ ಹತ್ತಿದ. ಹಾಗೆಯೇ ಒಂದು ಬಳ್ಳಿಯನ್ನು ಹಿಡಿದುಕೊಂಡ. ಮಣ್ಣಿನ ಗೋಡೆ ಕುಸಿಯತೊಡಗಿತು. ಆಹ್‌ಕ್ಯೂ ಭಯದಿಂದ ನಡುಗಿದ. ಆದರೆ ಒತ್ತೊತ್ತಾಗಿ ಬೆಳೆದಿದ್ದ

ಮರದ ಕೊಂಬೆಯೊಂದನ್ನು ಹಿಡಿದು ಕೊಂಡು ಜಿಗಿಯುವುದರಲ್ಲಿ ಯಶಸ್ವಿಯಾದ. ಆದರೂ ಹೆಂಡವಾಗಲೀ, ಹಬೆ ರೊಟ್ಟಿಯಾಗಲೀ ಅಥವಾ ತಿನ್ನಬಹುದಾದ ಏನೊಂದು ಪದಾರ್ಥವಾಗಲೀ ಕಾಣಿಸಲಿಲ್ಲ. ಪಶ್ಚಿಮ ಗೋಡೆಗೆ ಆನಿಕೊಂಡಂತೆ ಎಳೆಯ ಬಿದಿರಿನ ಪೊದರೆ ಇದ್ದರೂ, ಅದನ್ನು ಬೇಯಿಸಿರಲಿಲ್ಲ. ಹಾಗೆಯೇ ರೇಪ್‌ಗಿಡವೂ ಇತ್ತಾದರೂ ಅದು ಆಗಲೇ ಬೀಜಕ್ಕೆ ಬಂದಿತ್ತು. ಸಾಸಿವೆ ಗಿಡಗಳು ಹೂವಿಗೆ ಬಂದಿದ್ದವು. ಕೋಸು ಬಹಳ ಒರಟಾಗಿತ್ತು.

ಪರೀಕ್ಷೆಯಲ್ಲಿ ಫೇಲಾದ ವಿದ್ವಾಂಸನಿಗೆ ಆಗುವ ಹಾಗೆ ಅವನಿಗೆ ಅಸಮಾಧಾನವೆನಿಸಿತು. ನಿಧಾನವಾಗಿ ಬಾಗಿಲ ಕಡೆ ನಡೆಯುತ್ತಿದ್ದಂತೆ ಒಮ್ಮೆಲೇ ಅವನಿಗೆ ತಡೆಯಲಾರದಷ್ಟು ಸಂತೋಷವಾಯಿತು. ನೋಡ್ತಾನೆ, ಪೊಗದಸ್ತಾಗಿ ಗುಂಪಾಗಿ ಬೆಳೆದ ಟರ್ನಿಪ್‌ಗಳು! ಮೊಣಕಾಲೂರಿ ಅವುಗಳನ್ನು ಕೀಳತೊಡಗಿದ. ಇದ್ದಕ್ಕಿದ್ದಂತೆ ಗೇಟಿನ ಕಡೆಯಿಂದ ಯಾರೋ ಬಂದಂತಾಗಿ ತಿರುಗಿ ನೋಡಿದರೆ, ಬೇರೆ ಯಾರೂ ಅಲ್ಲ, ಮೊದಲು ನೋಡಿದ ಎಳೆ ಸನ್ಯಾಸಿನಿ ಅವಳಾಗಿದ್ದಳು. ಆದರೆ ಹಾಗೆಯೇ ಮರೆಯಾಗಿದ್ದಳು. ಇಂಥವರನ್ನು ಕಂಡರೆ ಆಹ್‌ಕ್ಯೂಗೆ ಆಗುತ್ತಿರಲಿಲ್ಲವಾದರೂ ಕೆಲವು ಸಲ, ಧೈರ್ಯ, ಸಾಹಸಕ್ಕಿಂತ ವಿವೇಕ ಮುಖ್ಯವಾಗುತ್ತದೆ. ಒಂದು ನಾಲ್ಕು ಟರ್ನಿಪ್‌ಗೆಡ್ಡೆಗಳನ್ನು ಹೊರಕ್ಕೆಳೆದು ಎಲೆ ಕಿತ್ತು ಬಿಸಾಡಿ, ಗೆಡ್ಡೆಗಳನ್ನು ಜೋಬಿಗೆ ಇಳಿಸಿದ. ಇಷ್ಟು ಹೊತ್ತಿಗೆ ಆ ಸನ್ಯಾಸಿನಿ ಹೊರಗೆ ಹೊರಟು ಬಿಟ್ಟಿದ್ದಳು.

ಬುದ್ಧನು ನಿನ್ನನ್ನು ರಕ್ಷಿಸಲಿ ಆಹ್‌ಕ್ಯೂ. ನಮ್ಮ ತೋಟಕ್ಕೆ ಬಂದು ಟರ್ನಿಪ್‌ಗಳನ್ನು ಕೀಳುವಂಥಾದೇನಾಗಿತ್ತು ನಿನಗೆ? ಎಂಥ ಕೆಟ್ಟ ಕೆಲಸ.... ಎಂಥ ಕೆಟ್ಟ ಕೆಲಸ... ಬುದ್ಧನೇ ನಮ್ಮನ್ನು ಕಾಪಾಡಲಿ.

ನಾನ್ಯಾವಾಗ ಹತ್ತಿ ಬಂದು ನಿಮ್ಮ ತೋಟದ ಟರ್ನಿಪ್‌ಗಳನ್ನು ಕದ್ದಿದ್ದೇನೆ? ಪ್ರತಿಭಟಿಸುತ್ತಲೇ ಹೆಜ್ಜೆ ಹಾಕಿದ. ಅವಳನ್ನು ಇನ್ನೂ ಗಮನಿಸುತ್ತಿದ್ದ.

"ಈಗ ನೀನು ಕದೀಲಿಲ್ವ?".... ಅವನ ಜಾಕೆಟ್ಟಿನ ಮಡಿಕೆಗಳತ್ತ ಬೊಟ್ಟು ಮಾಡುತ್ತ ಹೇಳಿದಳು.

"ಅವು ನಿನ್ನವೇನು? ನಿನಗೆ ಉತ್ತರ ಕೊಡುವ ಹಾಗೆ ಅವುಗಳನ್ನು ಮಾಡಬಲ್ಲೆಯೇನು?.... ನೀನು...."

ವಾಕ್ಯವನ್ನು ಮುಗಿಸದೆ ಆಹ್‌ಕ್ಯೂ ಎಷ್ಟು ಸಾಧ್ಯವೋ ಅಷ್ಟು ಬೇಗ ಓಡತೊಡಗಿದ. ಅವನ ಹಿಂದಿನಿಂದ ಅವನಷ್ಟೇ ವೇಗವಾಗಿ, ಸಾಕಷ್ಟು ದಪ್ಪವಿದ್ದ ನಾಯಿಯೂ ಅವನನ್ನು ಹಿಂಬಾಲಿಸಿ ಓಡಿತು. ಸಾಮಾನ್ಯವಾಗಿ ಗೇಟಿನ ಮುಂದೆ ಇರುತ್ತಿದ್ದ ಈ ನಾಯಿ ಹಿಂದಿನ ತೋಟಕ್ಕೆ ಹೇಗೆ ಬಂತು ಅನ್ನುವುದೇ ಒಂದು ರಹಸ್ಯವಾಗಿತ್ತು. ಆಹ್ ಕ್ಯೂನನ್ನು ಗುರ್ರೆಂದು ನೋಡುತ್ತಾ ಅವನನ್ನು ಹಿಂಬಾಲಿಸಿ, ಕಚ್ಚುವುದರಲ್ಲಿದ್ದಾಗ, ಬಚ್ಚಿಟ್ಟಿದ್ದ ಟರ್ನಿಪ್‌ಗಳು ಅವನ ಜಾಕೆಟ್ ಒಳಗಿಂದ ಕೆಳಗೆ ಬಿದ್ದವು. ಅಷ್ಟರಲ್ಲಿ ಆಹ್‌ಕ್ಯೂ ಒಂದು ಮರ ಹತ್ತಿ ಬಿಟ್ಟಿದ್ದ. ಮಣ್ಣಿನ ಗೋಡೆ ಏರುವ ಪ್ರಯತ್ನದಲ್ಲಿ ಜಾರಿ ಬಿದ್ದ. ಟರ್ನಿಪ್ಪುಗಳೂ ಅವನೂ ಎಲ್ಲ ಕಾನ್ವೆಂಟ್ ಹೊರಗೆ ಬಿದ್ದವು. ಹಿಪ್ಪೆನೇರಳೆ ಮರದ ಬಳಿ ಬೊಗಳುತ್ತಿದ್ದ ಕಪ್ಪು ನಾಯಿಯನ್ನು ಮತ್ತು ವಯಸ್ಸಾದ ಸನ್ಯಾಸಿನಿ ಪ್ರಾರ್ಥಿಸುತ್ತಿದ್ದುದನ್ನು ಬಿಟ್ಟು ಹೊರಟ.

ಆ ಸನ್ಯಾಸಿನಿ, ಮತ್ತೆ ಆ ಕಪ್ಪು ನಾಯಿಯನ್ನು ತನ್ನ ಮೇಲೆ ಬಿಡಬಹುದೆಂದು ಭಾವಿಸಿ, ಆಹ್‌ಕ್ಯೂ ಟರ್ನಿಪ್‌ಗಳನ್ನು ಆಯ್ದುಕೊಂಡು, ಹಾಗೆಯೇ ಚಿಕ್ಕ ಚಿಕ್ಕ ಕಲ್ಲುಗಳನ್ನು ಕೆಲವನ್ನು ಆರಿಸಿಕೊಂಡು ನಡೆದ. ಕಪ್ಪುನಾಯಿ ಮತ್ತೆ ಕಾಣಿಸಲಿಲ್ಲ. ಕಲ್ಲುಗಳನ್ನು ಬಿಸಾಡಿದ. ಸಾಗುತ್ತಿದ್ದಂತೆ ತನ್ನೊಳಗೇ ಮಾತನಾಡಿಕೊಂಡ - ಇಲ್ಲಿ ಏನೂ ಸಿಗೋದು ಸಾಧ್ಯವಿಲ್ಲ. ಪಟ್ಟಣಕ್ಕೆ ಹೋಗೋದೆ ವಾಸಿ...

ಮೂರನೆ ಟರ್ನಿಪ್ ಮುಗಿಸುವ ಹೊತ್ತಿಗೆ ಪಟ್ಟಣಕ್ಕೆ ಹೋಗುವ ನಿರ್ಧಾರ ಮಾಡಿದ್ದ.

## ಅಧ್ಯಾಯ - ೬

## ಪುನರದ್ಧಾರದಿಂದ ಅವನತಿ ವರೆಗೆ

ಆ ವರ್ಷ ಮೂನ್ ಫೆಸ್ಟಿವಲ್ ಆದ ನಂತರದ ವರೆಗೆ ವೀಷುವಾಂಗ್ ಜನರು ಆಹ್‌ಕ್ಯೂನನ್ನು ನೋಡಲೇ ಇಲ್ಲ. ಅವನು ಹಿಂತಿರುಗಿದ ಸುದ್ದಿ ಕೇಳಿ ಎಲ್ಲರಿಗೂ ಆಶ್ಚರ್ಯ ಆಗಿತ್ತು. ಇಷ್ಟು ದಿವಸ ಎಲ್ಲಿದ್ದಿರಬಹುದು ಎಂದು ಆಶ್ಚರ್ಯ ಪಡುತ್ತಿದ್ದರು ಬೇರೆ!

ಹಿಂದೆ ಕೆಲವು ಸಂದರ್ಭಗಳಲ್ಲಿ ತಾನು ಪಟ್ಟಣಕ್ಕೆ ಹೋಗುವಾಗೆಲ್ಲ ಬಹಳ ಉತ್ಸಾಹದಿಂದ ಮೊದಲೇ ಎಲ್ಲರಿಗೂ ತಿಳಿಸಿರುತ್ತಿದ್ದ. ಆದರೆ ಈ ಬಾರಿ ಯಾರಿಗೂ ಹೇಳದೆ ಇದ್ದ ಕಾರಣ, ಒಬ್ಬರಿಗೂ ಅವನು ಪಟ್ಟಣಕ್ಕೆ ಹೋಗುವ ವಿಷಯ ಗೊತ್ತಿರಲಿಲ್ಲ. ಅವನು ತನ್ನ ಗುಡಿಯಲ್ಲಿದ್ದ ಮುದುಕನಿಗೆ ಹೇಳಿದ್ದನೇನೋ. ಆದರೆ ಪದ್ಧತಿ ಪ್ರಕಾರ ವಿಷುವಾಂಗ್ ಜನಕ್ಕೆ ಮಿಸ್ಟರ್ ಚಾವೋ, ಮಿಸ್ಟರ್ ಚಿಯೆನ್ ಅಥವಾ ವಿದ್ಯಾವಂತ ಚಾವೋ ಮಗ ಪಟ್ಟಣಕ್ಕೆ ಹೋಗುವ ಸುದ್ದಿಗೆ ಪ್ರಾಮುಖ್ಯತೆ ಇರುತ್ತಿತ್ತು. ವಿದೇಶಿ ಅನುಕರಣೆ ಪಿಶಾಚಿ ಹೋಗುವ ಸುದ್ದಿ ಕೂಡಾ ಹೆಚ್ಚು ಚರ್ಚಿತವಾಗುತ್ತಿತ್ತು. ಆಹ್‌ಕ್ಯೂದು ಅಲ್ಪ ಸ್ವಲ್ಪ ಮಾತ್ರ ಚರ್ಚೆಯಾಗುತ್ತಿತ್ತು. ಅದಕ್ಕಾಗಿ ಮುದುಕ ಆಹ್‌ಕ್ಯೂ ಪಟ್ಟಣಕ್ಕೆ ಹೋದದ್ದನ್ನು ಯಾರ ಕಿವಿಗೂ ಬೀಳಿಸಲಿಲ್ಲ. ಊರಿನವರಿಗೆ ಇದರಿಂದ ತಿಳಿಯುವ ಅವಕಾಶವೂ ಆಗಲಿಲ್ಲ.

ಆಹ್‌ಕ್ಯೂ ಹಿಂತಿರುಗಿದ್ದು ಈ ಸಲ ಮಾಮೂಲಿಗಿಂತ ಭಿನ್ನವಾಗಿತ್ತು. ಎಲ್ಲರೂ ಆಶ್ಚರ್ಯ ಪಡುವಂಥ ಸಂದರ್ಭವೂ ಆಗಿತ್ತು. ಕತ್ತಲಾಗುತ್ತ ಬಂದಿತ್ತು. ಆ ಸಮಯದಲ್ಲಿ ನಿದ್ದೆ ಕಣ್ಣುಗಳನ್ನು ಪಿಳಿಪಿಳಿ ಬಿಡುತ್ತ ಹೆಂಡದಂಗಡಿ ಮುಂದೆ ನಿಂತಿದ್ದವನು ಕೌಂಟರ್ ಬಳಿಗೆ ನಡೆದ. ಜೇಬಿನಿಂದ ಒಂದು ಹಿಡಿ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ತೆಗೆದು ಮೇಲಕ್ಕೆ ಹಾರಿಸುತ್ತ ಕೌಂಟರ್ ಮೇಲೆ ಬೀಳಿಸಿದ. ನಗದು! ಎಂದ. ಹೆಂಡ ತಗೊಂಡು ಬಾ! ಹೊಸದಾದ ಲೈನಿಂಗ್ ಕೊಟ್ಟಿದ್ದ ಜಾಕೆಟ್ ಧರಿಸಿದ್ದ. ಅವನ ಬೆಲ್ಟಿನಿಂದ ಸಾಕಷ್ಟು ಹಣವಿದ್ದ ಥೈಲಿ ನೇತಾಡುತ್ತಿತ್ತು. ಥೈಲಿಯ ಭಾರಕ್ಕೆ ಅವನ ಬೆಲ್ಟ್ ಸ್ವಲ್ಪ ಜೋತಾಡುತ್ತಿತ್ತು. ವೀಷುವಾಂಗ್‌ನಲ್ಲಿ ಒಂದು ಪದ್ಧತಿಯಿತ್ತು. ಯಾರದಾದರೂ ಪರಿಸ್ಥಿತಿಯಲ್ಲಿ ಏನಾದರೂ ವ್ಯತ್ಯಾಸ ಕಂಡರೆ ಅಂತಹವನನ್ನು ನಿರ್ಲಕ್ಷ್ಯ ಮಾಡದೆ ಗೌರವದಿಂದ ಮಾತಾಡಿಸಬೇಕಿತ್ತು. ಈ ಆಹ್‌ಕ್ಯೂ ಯಾರೂಂತ ಚೆನ್ನಾಗಿ ಗೊತ್ತಿದ್ದರೂ

ತನ್ನ ಚಿಂದಿ ಉಡುವ ಸ್ಥಿತಿಯಿಂದ ಈಗ ಬೇರೆಯಾಗಿದ್ದ. ಪ್ರಾಚೀನ ಹೇಳಿಕೆಯೊಂದಿದೆ, "ಒಬ್ಬ ವಿದ್ವಾಂಸ ಮೂರು ದಿವಸಕ್ಕಾದರೂ ದೂರ ಹೋಗಿ ಬಂದರೆ ಅವನನ್ನು ಹೊಸ ಕಣ್ಣಿಂದ ನೋಡಬೇಕು ಅಂತ! ಅದಕ್ಕಾಗಿಯೇ ವೈಟರ್, ಹೊಟೆಲಿನ ಗ್ರಾಹಕರು ಹೋಗಿ ಬರುವ ಜನ ಎಲ್ಲರೂ ಗೌರವ ಪೂರ್ವಕ ಅನುಮಾನದ ಕಣ್ಣುಗಳಿಂದ ನೋಡಿದರು. ಹೊಟೆಲಿನವ ತಲೆಯಾಡಿಸುತ್ತ ವಿಚಾರಿಸಿದ.

"ಹಲೋ ಆಹ್‌ಕ್ಯೂ, ವಾಪಸ್ ಬಂದುಬಿಟ್ಟೆಯಾ?"

"ಹೌದು ವಾಪಸ್ ಬಂದೆ"

"ಓಹ್ ಚೆನ್ನಾಗಿ ದುಡ್ಡು ಮಾಡಿದ್ದೀಯ... ಎಲ್ಲಿ?"

"ಪಟ್ಟಣಕ್ಕೆ ಹೋಗಿದ್ದೆ."

ಮಾರನೆಯ ದಿವಸದಷ್ಟು ಹೊತ್ತಿಗೆ ಈ ವಿಷಯ ಊರಿಗೆಲ್ಲ ಗೊತ್ತಾಗಿ ಹೋಯಿತು. ಪ್ರತಿಯೊಬ್ಬರಿಗೂ ಆಹ್‌ಕ್ಯೂನ ಯಶಸ್ಸಿನ ಕತೆ, ಅವನ ಹೊಸ ಜಾಕೆಟ್‌ನ ಕತೆ ಕೇಳುವುದಕ್ಕೆ ಕುತೂಹಲ ಇದ್ದುದರಿಂದ, ಗುಡಿಯ ಗುಹೆಗಳು ಹೊಟೆಲುಗಳಲ್ಲಿ ಈ ಸುದ್ದಿಯ ಸತ್ಯಾಸತ್ಯತೆಯನ್ನು ಪರೀಕ್ಷಿಸ ತೊಡಗಿದರು. ಪರಿಣಾಮವಾಗಿ ಆಹ್‌ಕ್ಯೂನನ್ನು ಭಿನ್ನವಾದ ರೀತಿಯಲ್ಲಿ ನೋಡತೊಡಗಿದರು.

ಆಹ್‌ಕ್ಯೂ ಹೇಳುವ ಪ್ರಕಾರ, ಅವನು ಸಫಲನಾದ ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್ ಮನೆಯಲ್ಲಿ ಕೆಲಸಕ್ಕಿದ್ದ ಕಥೆಯ ಈ ಭಾಗ ಕೇಳಿದವರಿಗೆ ಅಷ್ಟೇನೂ ಖುಷಿಯಾಗಲಿಲ್ಲ. ಈ ಕ್ಯಾಂಡಿಡೇಟ್ ಹೆಸರು ಪೆಯ್ ಅಂತ. ಇಡೀ ಪಟ್ಟಣದಲ್ಲಿ ಇವನೊಬ್ಬನೇ ಸಫಲನಾದ ಅಭ್ಯರ್ಥಿಯಾದರೂ ಹೇಳಬೇಕಾದ ಅಗತ್ಯವಿರಲಿಲ್ಲ. ಅದು ಅರ್ಥ ಆಗುತ್ತಿತ್ತು. ವೀಷುವಾಂಗ್‌ನಲ್ಲಿ ಮಾತ್ರವೇ ಅಲ್ಲ, ಎಲ್ಲಿಯೂ ಈ ಬಗೆಯಲ್ಲಿ ವಿಶೇಷಣದೊಂದಿಗೆ ಹೇಳಬೇಕಾಗಿರಲಿಲ್ಲ. ಇಂಥವನ ಮನೆಯಲ್ಲಿ ಕೆಲಸ ಮಾಡಿದವನ ವಿಚಾರದಲ್ಲಿ ಗೌರವ ಅನಿವಾರ್ಯವಾಗಿತ್ತು. ಆದರೆ ಆಹ್‌ಕ್ಯೂ ಹೇಳಿದ ಪ್ರಕಾರ, ಅವನ ಮನೆಯಲ್ಲಿ ಕೆಲಸ ಮಾಡೋದು ಇಷ್ಟವಾಗಿರಲಿಲ್ಲ. ಯಾಕೇಂದ್ರೆ ಆಹ್‌ಕ್ಯೂ ದೃಷ್ಟಿಯಲ್ಲಿ ಅವನು ಶುದ್ಧ ಆಮೆ ಮೊಟ್ಟೆ ಯಾಗಿದ್ದ. ಇದನ್ನು ಕೇಳಿದ ಜನ ನಿಟ್ಟುಸಿರಿಟ್ಟರು. ಆದರೆ ಒಳಗೆ ಒಂದು ಥರಾ ಖುಷಿ ಪಟ್ಟರು. ಅವರಿಗೆ ಅನಿಸಿದ್ದು, ಆಹ್‌ಕ್ಯೂ ಅಂಥವನು, ಅವನಂಥ ದೊಡ್ಡ ವ್ಯಕ್ತಿ ಮನೇಲಿ ಕೆಲಸ ಮಾಡೋಕೆ ನಾಲಾಯಕ್ಕು. ಅವನು ಕೆಲಸ ಮಾಡದೇ ಹೋದದ್ದು ಅಯ್ಯೋ ಪಾಪ ಅಂತ ಅನಿಸಿತು.

ಆಹ್‌ಕ್ಯೂ ವಾಪಸ್ ಬರೋಕೆ ಮತ್ತೂ ಕಾರಣಗಳಿದ್ದವು. ಅವನಿಗೆ ಪಟ್ಟಣದವರ ಧೋರಣೆಗಳು ಹಿಡಿಸಲಿಲ್ಲ. ಉದ್ದನೆಯ ಬೆಂಚನ್ನು, ನೇರ ಬೇಂಚೆನ್ನುತ್ತಾರೆ. ಮೀನು ಹುರಿಯಲು ಎಳೆ ಎಳೆಯಾಗಿ ಶ್ಯಾಲೋಟನ್ನು ಬಳಸುತ್ತಾರೆ, ಹೆಂಗಸರು ನಡೆಯುವಾಗ ಸರಿಯಾಗಿ ಬಳುಕುವುದಿಲ್ಲ - ಇತ್ಯಾದಿ ಕಾರಣಗಳಿದ್ದವು. ಆದರೆ ಪಟ್ಟಣದವರಲ್ಲಿ ಕೆಲವು ಒಳ್ಳೆಯ ಅಂಶಗಳೂ ಇದ್ದವು. ಉದಾಹರಣೆಗೆ ಹೇಳೋದಾದರೆ ವೀಷುವಾಂಗ್ ಜನ, ೩೨ ಬ್ಯಾಂಬು ಕೌಂಟರ್ ಆಟವನ್ನು ಆಡುವರು. ವಿದೇಶಿ ಅನುಕರಣೆ ಪಿಶಾಚಿ ಮಾತ್ರ ಮಾಹ್-ಜೋಂಗ್ ಆಟ ಆಡಬಲ್ಲ. ಆದರೆ ಪಟ್ಟಣದಲ್ಲಿ ಬೀದಿ ಮಕ್ಕಳೂ ಕೂಡಾ ಈ ಆಟದಲ್ಲಿ ಪರಿಣಿತರು. ಏನಿಲ್ಲ, ನಮ್ಮ ಈ ವಿದೇಶಿ ಅನುಕರಣೆ ಪಿಶಾಚೀನ ತಂದು ಈ ರ್‍ಯಾಸ್ಕಲ್ಸ್ ಮಧ್ಯೆ ನಿಲ್ಲಿಸಿ ಬಿಡಬೇಕು. ಅಗ ನೋಡಬೇಕು, ನಮ್ಮ ವಿದೇಶಿ ಪಿಶಾಚಿ ಹೇಗಿರ್ತಾನೇಂದ್ರೆ ನರಕದ ರಾಜನ ಎದುರು ಸಣ್ಣ ಪಿಶಾಚಿ ಥರ ಇರ್ತಾನೆ! ಈ ಕಥೆ ಭಾಗ ಕೇಳಿದವರೆಲ್ಲರಿಗೂ ಒಂದು ಥರ ನಾಚುವಂತಾಯಿತು.

"ಮರಣದಂಡನೆ ವಿಧಿಸುವುದನ್ನು ನೀವೇನಾದರೂ ನೋಡಿದ್ದೀರಾ?" ಆಹ್‌ಕ್ಯೂ ಕೇಳಿದ. ಅದ್ಭುತ! ಅದ್ಭುತವಾದ ದೃಶ್ಯ! ತನ್ನ ತಲೆ ಅಲ್ಲಾಡಿಸುತ್ತ ಮಾತನಾಡುತ್ತಿದ್ದ ಆಹ್‌ಕ್ಯೂನ ಎಂಜಲು ಅವನಿಗೆ ಎದುರಾಗಿ ನಿಂತಿದ್ದ, ಚಾವೋ ಷೂ ಷೆನ್ ನ ಮುಖದ ಮೇಲೆ ಬಿತ್ತು. ಕಥೆಯ ಈ ಭಾಗ ಅಲ್ಲಿದ್ದವರೆಲ್ಲರೂ ನಡುಗುವಂತೆ ಮಾಡಿತು. ಒಂದು ಕ್ಷಣ ಸುತ್ತಲೂ ಕಣ್ಣಾಡಿಸಿದ. ಇದ್ದಕ್ಕಿದ್ದಂತೆ ತನ್ನ ಬಲಗೈಯನ್ನು ವಿಸ್ಕರ್ಸ್ ವ್ಯಾಂಗ್ ಕತ್ತಿನ ಮೇಲೆ ಹಾಕಿದ ವ್ಯಾಂಗೋ ತಲೆ ಮುಂದಕ್ಕೆ ಚಾಚಿ ಬಹಳ ಕುತೂಹಲದಿಂದ ಕತೆ ಕೇಳುತ್ತಿದ್ದ.

"ಕೊಲ್ಲು" - ಆಹ್‌ಕ್ಯೂ ಕಿರುಚಿದ.

ವಿಸ್ಕರ್ಸ್‌ವಾಂಗ್ ಬೆಚ್ಚಿ ಬಿದ್ದ. ತನ್ನ ತಲೇನ ಮಿಂಚಿನಷ್ಟೇ ವೇಗವಾಗಿ ಹಿಂದಕ್ಕೆ ಎಳೆದುಕೊಂಡ. ಅಕ್ಕ ಪಕ್ಕದಲ್ಲಿ ನಿಂತಿದ್ದವರು ಆತಂಕ, ಭಯದಿಂದ ನಡುಗಿದರು. ಇದಾದ ಮೇಲೆ ವ್ಯಾಂಗ್ ಎಷ್ಟೋ ದಿನಗಳು ಇದೇ ಭಯದ ಗುಂಗಿನಲ್ಲಿದ್ದ. ಆಹ್‌ಕ್ಯೂನ ನೆರಳಿಗೆ ಹೋಗಲೂ ಹೆದರಿದ.

ವೀಷುವಾಂಗ್ ಜನರ ದೃಷ್ಟಿಯಲ್ಲಿ ಆಹ್‌ಕ್ಯೂಗೆ ಚಾವೋಗೆ ಇದ್ದುದಕ್ಕಿಂತಲೂ ಗೌರವ ಭಾವನೆ ಇತ್ತು ಎಂದು ಹೇಳುವುದು ಕಷ್ಟವಾದರೂ, ಇಬ್ಬರ ನಡುವೆಯೂ ಸಮಾನ ಗೌರವ ಇದ್ದಿತೆಂಬುದಂತೂ ಸತ್ಯವಾಗಿತ್ತು.

ಮತ್ತೆ ಸ್ವಲ್ಪ ದಿನಕ್ಕೆ ಆಹ್‌ಕ್ಯೂನ ಖ್ಯಾತಿ ಹೆಂಗಸರ ಖೋಲಿಗಳೊಳಕ್ಕೂ ಪ್ರವೇಶವಾಯಿತು. ಚಾವೋ ಚಿಯೆನ್ ಕುಟುಂಬಗಳು ಬಿಟ್ಟರೆ ಮಿಕ್ಕವರೆಲ್ಲರದ್ದು ಬಡ ಸಂಸಾರಗಳು. ಆದರೂ ಹೆಂಗಸರ ಖೋಲಿಗಳು ಅಂದರೆ ಹೆಂಗಸರ ಖೋಲಿಗಳೇ! ಆಹ್‌ಕ್ಯೂನ ಕೀರ್ತಿ ಅಲ್ಲೆಲ್ಲಾ ನುಗ್ಗಿದ್ದಂತೂ ಒಂದು ಪವಾಡವಾಗಿತ್ತು. ಹೆಂಗಸರು ಸೇರಿದಾಗ ಪರಸ್ಪರ ಮಾತಾಡಿಕೊಳ್ಳುತ್ತಿದ್ದರು. ಮಿಸೆಸ್ ತ್ಸೂವೋ ಆಹ್‌ಕ್ಯೂನಿಂದ ನೀಲಿ ಸ್ಕರ್ಟ್ ಕೊಂಡುಕೊಂಡಳಂತೆ. ಅದು ಹಳೇದೇ ಆಗಿದ್ದರೂ ಕೇವಲ ೯೦ ಸೆಂಟ್‌ಗಳಷ್ಟು ಬೆಲೆ ಅಂತೆ. ಮತ್ತೆ ಚಾವೊ ಪೈ-ಯನ್‌ನ ತಾಯಿ (ಇದನ್ನು ಪರೀಕ್ಷಿಸಬೇಕಿದೆ. ಯಾಕೆಂದರೆ, ಈಕೆಯನ್ನು ಚಾವೊ ಶೂ ಷೆನ್‌ನ ತಾಯಿ ಎಂತಲೂ ಹೇಳಿದ್ದಾರೆ) ದಟ್ಟಕೆಂಪಿನ ಮಗುವಿನ ಫಾರೆನ್ ಕ್ಯಾಲಿಕೋ ಉಡುಪನ್ನು ಸಾಕಷ್ಟು ಹೊಸದಾಗಿಯೇ ಇದ್ದುದನ್ನು ಶೇಕಡ ಎಂಟರ ರಿಯಾಯಿತಿಯಲ್ಲಿ ಕೇವಲ ಮುನ್ನೂರಕ್ಕೆ ಕೊಂಡಳಂತೆ!"

ಯಾರು ತಮ್ಮ ಹತ್ತಿರ ಸಿಲ್ಕ್ ಅಥವಾ ಫಾರೆನ್ ಕ್ಯಾಲಿಕೋ ಬಟ್ಟೆಯ ಸ್ಕರ್ಟ್ ಇರಲಿಲ್ಲವೋ, ಅವರೆಲ್ಲ ಆಹ್‌ಕ್ಯೂನನ್ನು ಕಾಣುವ ಉತ್ಸುಕತೆಯಲ್ಲಿದ್ದರು. ಯಾಕೆಂದರೆ ಅವರಿಗೂ ಅವನಿಂದ ಅವುಗಳನ್ನು ಕೊಳ್ಳುವ ಆಸೆಯಾಗಿತ್ತು. ಅವನಿಂದ ತಪ್ಪಿಸಿ ಕೊಳ್ಳುವುದಕ್ಕೆ ಬದಲಾಗಿ, ಈಗೀಗ ಅವನನ್ನೇ ಹಿಂಬಾಲಿಸಿ, ಅವನನ್ನು ನಿಲ್ಲಲು ಕೂಗಿ ಹೇಳುತ್ತಿದ್ದರು.

"ಆಹ್‌ಕ್ಯೂ ನಿನ್ನ ಬಳಿ ಇನ್ನೂ ಸಿಲ್ಕ್ ಸ್ಕರ್ಟ್‌ಗಳು ಇವೆಯೇನು? ಅವರು ವಿಚಾರಿಸುತ್ತಿದ್ದರು.

"ಇಲ್ಲವೇ? ನಮಗೆ ಫಾರೆನ್ ಕ್ಯಾಲಿಕೋ ಕೂಡ ಬೇಕಿತ್ತು. ನಿನ್ನ ಹತ್ತಿರ ಏನಾದರೂ ಇದೆಯೇನು?

ಈ ಸುದ್ದಿ ಬಡವರ ಮನೆಯಿಂದ ಶ್ರೀಮಂತರ ಮನೆಗಳ ವರೆಗೂ ಹರಡಿತು. ಮಿಸೆಸ್ ತ್ಸುವೊ ತಾನುಕೊಂಡ ಸಿಲ್ಕ್ ಸ್ಕರ್ಟ್‌ನಿಂದ ಎಷ್ಟೊಂದು ಖುಷಿ ಪಟ್ಟಿದ್ದಳೆಂದರೆ ಅದನ್ನು ಮಿಸೆಸ್ ಚಾವೋಗೆ, ತೋರಿಸಿದಳು, ಮಿಸೆಸ್ ಚಾವೋ ಅಂತೂ ಮಿಸ್ಟರ್ ಚಾವೋ ಬಳಿ ಅದನ್ನು ಹೊಗಳಿದ್ದೇ ಹೊಗಳಿದ್ದು!

ಮಿಸ್ಟರ್ ಚಾವೋ ರಾತ್ರಿ ಊಟದ ಸಮಯದಲ್ಲಿ ಈ ವಿಷಯವಾಗಿ ತನ್ನ ಮಗನೊಂದಿಗೆ ಮಾತನಾಡಿ, ಆಹ್‌ಕ್ಯೂ ವಿಚಾರದಲ್ಲಿ ಏನೋ ಇರಬೇಕು ಎಂಬ

ಸಂದೇಹ ವ್ಯಕ್ತಪಡಿಸಿದ. ಅಲ್ಲದೆ ಅವನ ವಿಷಯದಲ್ಲಿ ಮನೆಯಲ್ಲಿ ಎಲ್ಲರೂ ಎಚ್ಚರಿಕೆಯಿಂದ ಇರಬೇಕೆಂದ. ಆಹ್‌ಕ್ಯೂ ಹತ್ತಿರ ಏನಿತ್ತೋ ಇರಲಿಲ್ಲವೋ, ಆದರೆ ಅವನಲ್ಲಿ ಒಂದು ಒಳ್ಳೆದಂತೂ ಇರಲೇಬೇಕು ಅನ್ನುವ ಅಭಿಪ್ರಾಯ ವ್ಯಕ್ತ ಪಡಿಸಿದ. ಮಿಸೆಸ್ ಚಾವೊ, ಅಗ್ಗವಾದ, ಉಣ್ಣೆಯ, ಅಂದವಾದ ಜಾಕಟ್ ಬೇಕೂಂತ ಆಸೆ ಪಟ್ಟಿದ್ದರಿಂದ, ಮನೆಯವರೆಲ್ಲರ ಜೊತೆ ಮಾತಾಡಿದ ಮೇಲೆ, ಮಿಸೆಸ್ ತ್ಸುವೊಳನ್ನು ಈ ಜಾಕೆಟ್ ಆಹ್‌ಕ್ಯೂ ಬಳಿ ಸಿಗುತ್ತದೆಯೇ ಎಂದು ವಿಚಾರಿಸಲು ಹೇಳಿದರು. ಇದಕ್ಕೆ ವಿಶೇಷ ಪರವಾನಗಿ ಕೊಟ್ಟು, ನಿಯಮ ಸಡಿಲಿಸಿ, ಆ ಸಂಜೆ ದೀಪ ಹಚ್ಚಲು ಅನುವು ಮಾಡಲಾಯಿತು.

ಸಾಕಷ್ಟು ಎಣ್ಣೆ ಖರ್ಚಾಯಿತಾದರೂ ಆಹ್‌ಕ್ಯೂನ ಸುಳಿವೇ ಇರಲಿಲ್ಲ. ಚಾವೋ ಮನೆಯವರೆಲ್ಲರೂ ನಿದ್ದೆಯಿಂದ ಆಕಳಿಸುತ್ತಿದ್ದರು. ಆಹ್‌ಕ್ಯೂನ ಅಶಿಸ್ತಿಗಾಗಿ ಅಸಮಾಧಾನಗೊಂಡಿದ್ದರು. ಬೇರೆಯವರೆಲ್ಲರೂ ತ್ಸುವೋಳನ್ನು ಆಹ್‌ಕ್ಯೂನನ್ನು ಹೊತ್ತಿಗೆ ಸರಿಯಾಗಿ ಬರಹೇಳಲಿಲ್ಲವೆಂದು ಬೈದರು. ಮಿಸೆಸ್ ಚಾವೋ, ಹೋದ ವರುಷ ಹಾಕಿದ ಷರತ್ತುಗಳಿಂದಾಗಿ ಆಹ್‌ಕ್ಯೂ ಬರಲಿಲ್ಲವೇನೋ ಎಂದು ಹೆದರಿದಳು. ಆದರೆ ಮಿಸ್ಟರ್ ಚಾವೋಗೆ ಹೀಗೇನೂ ಎನಿಸಲಿಲ್ಲ. ಅವನಿಗೆ ಗೊತ್ತು, ಈ ಸಲ ತಾನೇ ಹೇಳಿ ಕಳಿಸಿರುವುದರಿಂದ ಬರುತ್ತಾನೆ ಎಂದುಕೊಂಡಿದ್ದ. ಚಾವೋನ ವಿಚಾರ ಸರಿಯಾಗಿತ್ತು. ಯಾಕೆಂದರೆ ಆಹ್‌ಕ್ಯೂ ಕಡೆಗೆ, ಮಿಸೆಸ್ ತ್ಸುವೊ ಜೊತೆಗೆ ಬಂದೇ ಬಂದ.

"ಅವನ ಹತ್ತಿರ ಈಗ ಅಂಥಾದೇನೂ ಉಳಿದಿಲ್ಲ ಅಂತ ಹೇಳ್ತಿದ್ದಾನೆ" ಎದುಸಿರು ಬಿಡುತ್ತ ತ್ಸುವೋ ಹೇಳಿದಳು. "ನೀನೇ ಹೋಗಿ ಇದನ್ನು ಅವರ ಹತ್ತಿರ ಹೇಳೂಂತ ಹೇಳ್ತಾನೆ ಇದ್ದೀನಿ. ಆದರೆ ಅವನೋ ಮಾತಾಡುತ್ತಲೇ ಇದ್ದ. ನಾನು ಅವನಿಗೆ ಹೇಳಿದೆ...."

ಸರ್, ಮುಗುಳು ನಗುವ ಪ್ರಯತ್ನದೊಂದಿಗೆ ಹೇಳಿದ.

"ಏನಪ್ಪ ನೀನು ಅಲ್ಲಿ ಹೋಗಿ ಬಹಳ ಸಾಹುಕಾರನಾಗಿ ಬಿಟ್ಟೆಯಂತೆ!" ಆಹ್‌ಕ್ಯೂ ಬಳಿಗೆ ಹೋಗಿ ಬಹಳ ಎಚ್ಚರಿಕೆಯಿಂದ ಅವನನ್ನೇ ನೋಡುತ್ತ ಚಾವೋ ಹೇಳಿದ.... "ತುಂಬಾ ಸಂತೋಷ, ಈಗ ... ಅದೇ ಅವರೆಲ್ಲ ಹೇಳುತ್ತಾ ಇದ್ದಾರೆ... ನಿನ್ನ ಹತ್ತಿರ ಏನೇನೋ ಒಳ್ಳೊಳ್ಳೆ ವಸ್ತುಗಳು ಇವೆಯಂತೆ!... ನಾವೆಲ್ಲ ನೋಡ್ಬೇಕೂಂತ ಇದ್ದೀವಿ.

ಅವನ್ನೆಲ್ಲ ಒಮ್ಮೆ ತಗೊಂಬಾ... ನಮಗೆ ಇವು ಬೇಕಾಗಿರುವುದರಿಂದ ಹೇಳ್ತಾ ಇದೀನಿ..."

"ಮಿಸೆಸ್ ತ್ಸುವೋಗೆ ಹೇಳಿದ್ದೆ, ನನ್ನ ಬಳಿ ಈಗ ಅವೇನೂ ಇಲ್ಲಾಂತ!"

"ಏನೂ ಇಲ್ವೆ?" ಮಿಸ್ಟರ್ ಚಾವೋ ದನಿಯಲ್ಲಿ ನಿರಾಶೆ ವ್ಯಕ್ತವಾಗುತ್ತಿತ್ತು. "ಅಷ್ಟು ಬೇಗ ಅವೆಲ್ಲ ಹೇಗೆ ಖರ್ಚಾಯಿತು?"

"ಅವು ನನ್ನ ಫ್ರೆಂಡ್‌ಗೆ ಸೇರಿದ್ದು. ವಾಸ್ತವವಾಗಿ ನನ್ನ ಹತ್ತಿರ ಅಷ್ಟೊಂದು ಇರಲೂ ಇಲ್ಲ. ಜನ ಕೆಲವನ್ನು ಕೊಂಡುಕೊಂಡರು."

"ಸ್ವಲ್ಪನಾದರೂ ಉಳಿದಿರಬೇಕಲ್ಲ?"

"ಬಾಗಿಲು ಪರದೆ ಮಾತ್ರ ಒಂದು ಉಳಿದಿದೆ."

"ಹಾಗಾದರೆ ಅದನ್ನೇ ನೋಡೋಕೆ ತಗೊಂಡು ಬಾ." - ಮಿಸೆಸ್ ಚಾವೋ ಆತುರದಲ್ಲಿ ಹೇಳಿದಳು.

"ಆಯಿತು. ಅದನ್ನು ನಾಳೆ ತಂದರೂ ಆಗುತ್ತೆ" - ಚಾವೋನ ಮಾತಿನಲ್ಲಿ ಅಷ್ಟೊಂದು ಕಾತುರ ಇರಲಿಲ್ಲ.

"ಇನ್ನು ಮುಂದೆ ನಿನ್ನ ಹತ್ತಿರ ಏನಾದರೂ ಇದ್ದರೆ ಮೊದಲು ನಮಗೆ ತಂದು ತೋರಿಸಬೇಕು ಆಹ್‌ಕ್ಯೂ" ಚಾವೋ ಹೇಳಿದ.

"ಬೇರೆಯವರು ಕೊಡೋದಕ್ಕಿಂತ ಕಡಿಮೆ ಬೆಲೆಯೇನೂ ನಾವು ಕೊಡೋದಿಲ್ಲ" ಕೌಂಟಿ ಕ್ಯಾಂಡಿಡೇಟ್ ಹೇಳಿದ. ಆತನ ಹೆಂಡತಿ ಒಂದು ಸಲ ಆಹ್‌ಕ್ಯೂನ ಪ್ರತಿಕ್ರಿಯೆ ಏನೂಂತ ಗಮನಿಸಲು ಕಣ್ಣು ಹಾಯಿಸಿದಳು.

"ನನಗೆ ಫರ್ ಜಾಕೆಟ್ ಬೇಕಾಗಿದೆ." ಮಿಸೆಸ್ ಚಾವೋ ಹೇಳಿದಳು.

ಆಹ್‌ಕ್ಯೂ ಒಪ್ಪಿಕೊಂಡರೂ ಅವನು ಎಷ್ಟು ನಿರ್ಲಕ್ಷ್ಯದಿಂದ ವರ್ತಿಸಿದ ಅಂದರೆ, ಅವರು ಹೇಳಿದ್ದೆಲ್ಲ ಜಾಗರೂಕತೆಯಿಂದ ಮನಸ್ಸಿಗೆ ತೆಗೆದುಕೊಂಡದ್ದೇ ಅನುಮಾನ ಎನಿಸುವಂತಿತ್ತು. ಇದರಿಂದ ಮಿಸ್ಟರ್ ಚಾವೋಗೆ ಎಷ್ಟು ನಿರಾಶೆಯಾಯಿತು, ಎಷ್ಟು ಕೋಪ ಬಂತು, ಎಷ್ಟೊಂದು ಚಿಂತೆಯಾಯ್ತು ಎಂದರೆ ಆಕಳಿಸುವುದನ್ನೂ ನಿಲ್ಲಿಸಿಬಿಟ್ಟ. ಆಹ್‌ಕ್ಯೂ ವರ್ತನೆಯಿಂದ ಕೌಂಟಿ ಕ್ಯಾಂಡಿಡೇಟ್ ಕೂಡ ಎಷ್ಟು

ಅಸಂತೃಪ್ತನಾಗಿದ್ದನೆಂದರೆ, "ಜನ ಇಂತಹ ಆಮೆ ಮೊಟ್ಟೆಯವರಿಂದ ದೂರ ಇರಬೇಕು ಇಲ್ಲದೆ ವೀಷುವಾಂಗ್‌ನಲ್ಲಿ ಇಂಥವರು ಇರುವುದಕ್ಕೆ ಅವಕಾಶ ಮಾಡಿಕೊಡದಂತೆ, ಬೈಲಿಫ್‌ಗೆ ಹೇಳಬೇಕು" ಎಂದ.

ಚಾವೋ ಈ ಮಾತಿಗೆ ಒಪ್ಪಲಿಲ್ಲ. ಇದರಿಂದ ಅವನು ದ್ವೇಷ ಸಾಧಿಸಬಹುದು. ಹಾಗೆ ನಾವೇನೂ ಮಾಡಬಾರದು. ಹದ್ದು ತನ್ನ ಗೂಡಿನ ಮೇಲೆ ತಾನೇ ಎರಗುವುದಿಲ್ಲ. ನಮ್ಮೂರಿನ ಜನ ನಾವು ಹೆಚ್ಚು ಯೋಚನೆ ಮಾಡಬಾರದು. ಆದರೆ ಸ್ವಲ್ಪ ಎಚ್ಚರಿಕೆಯಿಂದ ಇರಬೇಕು. ತಂದೆಯ ಮಾತು ಬಹಳ ಸರಿ ಅಂತ ಅನ್ನಿಸಿ, ಆಹ್‌ಕ್ಯೂನನ್ನು ಊರಿಂದ ಓಡಿಸುವ ಆಲೋಚನೆಯನ್ನು ಆ ಕ್ಷಣಕ್ಕೆ ಕೈ ಬಿಟ್ಟ. ಆದರೆ ತಾನು ಹೇಳಿದ್ದನ್ನು ಯಾವುದೇ ಕಾರಣಕ್ಕೂ ಯಾರಿಗೂ ಹೇಳಬಾರದೆಂದು ಎಚ್ಚರಿಸಿದ.

ಮಾರನೇ ದಿನ ತ್ಸುವೊ ತನ್ನ ನೀಲಿ ಸ್ಕರ್ಟ್‌ನ್ನು ಕಪ್ಪು ಬಣ್ಣ ಹಾಕಿಸಲು ತೆಗೆದುಕೊಂಡು ಹೋದಾಗ ಚಾವೋನ ಮಗ ಹೇಳಿದ್ದನ್ನು ಹೇಳಿಯೇ ಹೇಳಿದಳು. ಆಹ್‌ಕ್ಯೂನನ್ನು ಓಡಿಸುವ ವಿಚಾರವನ್ನು ಬಹಿರಂಗ ಪಡಿಸಿದ್ದು ಆಹ್‌ಕ್ಯೂಗೆ ಹೆಚ್ಚು ಮಾರಕವಾಯಿತು. ಬೈಲಿಫ್ ಅವನ ಮನೆ ಬಾಗಿಲಿಗೆ ಬಂದು ಬಾಗಿಲಿನ ಪರದೆಯನ್ನು ತೆಗೆದುಕೊಂಡು ಹೋದ. ಮಿಸೆಸ್ ಚಾವೋ ಬೇಕೆಂದು ಹೇಳಿದ್ದಾಳೇಂತ ಎಷ್ಟೇ ಕೇಳಿಕೊಂಡರೂ ಅದನ್ನು ವಾಪಸ್ಸು ಕೊಡುವುದಿರಲಿ, ತಿಂಗಳು ತಿಂಗಳಿಗೆ ಅವನ ಗುಟ್ಟು ರಟ್ಟು ಮಾಡದಿರಲು ಹಣ ಕೊಡಬೇಕೆಂದೂ ಹೇಳಿದ. ಎರಡನೆಯದಾಗಿ ಊರಿನವರು ಗೌರವ ಕೊಡುವುದರಲ್ಲಿ ಬದಲಾವಣೆ ಕಾಣಿಸಿತು. ಅವನ ಜೊತೆ ಅಷ್ಟು ಸಲುಗೆ ತೆಗೆದುಕೊಳ್ಳದಿದ್ದರೂ ಅವನಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾದಷ್ಟು ಪ್ರಯತ್ನಿಸುತ್ತಿದ್ದರು. "ಕೊಲ್ಲು" ಅಂತ ಕಿರುಚಿದ್ದಕ್ಕೆ ಅವರಲ್ಲಿ ಉಂಟಾಗಿದ್ದ ಭಯಕ್ಕಿಂತ ಭಿನ್ನವಾಗಿ, ಹಿಂದಿನವರು ದೆವ್ವಗಳ ಜೊತೆ ನಡೆದುಕೊಳ್ಳುತ್ತಿದ್ದ ರೀತಿಯಲ್ಲಿ ಭಯ ಭಕ್ತಿಯಿಂದ ದೂರವಿರುತ್ತಿದ್ದರು.

ಆದರೆ ಕೆಲವರು ಸೋಮಾರಿ ಉಡಾಳರು ವಿಷಯದ ಆಳ ತಿಳಿಯಲು ಆಹ್‌ಕ್ಯೂನನ್ನು ಜಾಣತನದಿಂದ ವಿಚಾರಿಸಿದರು. ಆಹ್‌ಕ್ಯೂ ಗುಟ್ಟಾಗಿ ಇಡಬೇಕು ಅನ್ನೋ ಪ್ರಜ್ಞೇನೂ ಇಲ್ಲದೆ ನಡೆದ ಎಲ್ಲವನ್ನೂ ಹೆಮ್ಮೆಯಿಂದ ಹೇಳಿಕೊಂಡ. ಅವನಿಂದ ಅವರಿಗೆ ತಿಳಿದದ್ದು, ಆಹ್‌ಕ್ಯೂ ಕೇವಲ ಒಬ್ಬ ಚಿಲ್ಲರೆ ಕಳ್ಳನಾಗಿದ್ದ. ಕಳ್ಳತನ ಮಾಡುವ ಸಾಹಸ ಇಲ್ಲದೆ, ಕದ್ದ ವಸ್ತುಗಳನ್ನು ಪಡೆಯುತ್ತಿದ್ದನಷ್ಟೆ.

ಒಂದು ರಾತ್ರಿ ಅವನಿಗೆ ಒಂದು ಗಂಟು ಸಿಕ್ಕಿತು. ಅವನ ಮುಖ್ಯಸ್ಥ ಮತ್ತೊಮ್ಮೆ ಒಳಗೆ ಹೋಗಿದ್ದ. ಸ್ವಲ್ಪ ಹೊತ್ತಿಗೆ ಒಳಗೆ ದೊಡ್ಡ ಗದ್ದಲ ಕೇಳಿಸಿತು. ಇದನ್ನು ಕೇಳಿದ್ದೇ ಆಹ್‌ಕ್ಯೂ ಕಾಲಿಗೆ ಬುದ್ಧಿ ಹೇಳುತ್ತ ಎಷ್ಟು ಸಾಧ್ಯವೋ ಅಷ್ಟು ವೇಗವಾಗಿ ಓಡಿ ಬಂದಿದ್ದ. ಆ ದಿನ ರಾತ್ರಿಯೇ ಪಟ್ಟಣ ಬಿಟ್ಟು ವೀಷುವಾಂಗ್‌ಗೆ ಹಿಂತಿರುಗಿದ್ದ. ಇದಾದ ಮೇಲೆ ಇಂಥ ಕೆಲಸಕ್ಕೆ ಎಂದಿಗೂ ಸಾಹಸ ಮಾಡಲಿಲ್ಲ. ಆದರೆ ಈ ಕಥೆ ಆಹ್‌ಕ್ಯೂನ ವ್ಯಕ್ತಿತ್ವಕ್ಕೇ ಅಪಾಯಕಾರಿಯಾಗಿತ್ತು. ಊರಿನ ಜನ ಈಗ ಆಹ್‌ಕ್ಯೂನ ಮೇಲೆ ಗೌರವವಿಟ್ಟು ದೂರವಿರುತ್ತಿದ್ದರು. ಅವನ ಕೋಪವನ್ನು ಎದುರಿಸಲು ಹೆದರುತ್ತಿದ್ದರು. ಅವನು ಕೇವಲ ಕಳ್ಳ ಮಾತ್ರ ಆಗಲು ಸಾಧ್ಯ ಅಂತ ಯಾರು ತಾನೇ ಊಹಿಸಿದ್ದರು? ಮತ್ತೊಂದು ಸಲ ಕಳ್ಳತನ ಮಾಡಲೂ ಹೆದರುವವನಿಗೆ, ತನ್ನ ಬಗ್ಗೆ ಹೆದರಿಕೆ ಉಂಟಾಗುವಂತೆ ಮಾಡುವುದಕ್ಕೆಲ್ಲಿದೆ ಸಾಮರ್ಥ್ಯ?

# ಅಧ್ಯಾಯ - ೭

## ಕ್ರಾಂತಿ

೧೯೧೧ ರ ಕ್ರಾಂತಿಯಲ್ಲಿ ಷಾವೋಸಿಂಗ್ ಬಿಡುಗಡೆಯಾದ ದಿನ ಆಹ್‌ಕ್ಯೂ ತನ್ನ ಪರ್ಸನ್ನು ಚಾವೋ ಪೈಯೆನ್‌ನಿಗೆ ಮಧ್ಯರಾತ್ರಿ ಮಾರಿದ. ಮೂರನೆ ಗಡಿಯಾರದಲ್ಲಿ ನಾಲ್ಕನೇ ಗಂಟೆ ಹೊಡೆದಾಗ, ಒಂದು ದೊಡ್ಡ ದೋಣಿ ಕಪ್ಪು ಬಟ್ಟೆಯ ಛಾವಣಿಯಿಂದ ಕೂಡಿದ್ದು ಚಾವೋನ ಮನೆಯ ಇಳಿದಾಣದ ಬಳಿ ಬಂದು ನಿಂತಿತು. ಈ ದೋಣಿ, ಊರಿನ ಜನ ಗಾಢ ನಿದ್ದೆಯಲ್ಲಿ ಮುಳುಗಿರುವ ಸಮಯದಲ್ಲಿ ಕತ್ತಲಲ್ಲಿ ತೇಲಾಡುತ್ತಿತ್ತು. ಯಾರಿಗೂ ಇದರ ಬಗ್ಗೆ ಸುಳಿವು ಹತ್ತಲಿಲ್ಲ. ಬೆಳಿಗ್ಗೆ ಹೊತ್ತಿಗೆ ಅದು ಅಲ್ಲಿಂದ ಹೊರಟಿತ್ತಾದರೂ, ಹೋಗುವುದನ್ನು ಸುಮಾರು ಜನ ನೋಡಿದರು. ಸ್ವಲ್ಪ ಶೋಧನೆ ನಡೆಸಿದ ಮೇಲೆ ಗೊತ್ತಾಯಿತು, ಅದು ಚಾವೋನ ಮಗನದಾಗಿತ್ತು.

ಈ ಘಟನೆ ವೀಷುವಾಂಗ್ ಜನಕ್ಕೆ ಯಾಕೋ ಕಷ್ಟಕ್ಕೆ ಬಂತು ಅಂತ ಅನ್ನಿಸಿತು. ಎಲ್ಲರ ಎದೆ ಬಡಿತ ಜೋರಾಯಿತು. ಚಾವೋ ಕುಟುಂಬ ಮಾತ್ರ ಈ ದೋಣಿ ವಿಚಾರದಲ್ಲಿ ಮೌನ ವಹಿಸಿತ್ತು. ಹೆಂಡದಂಗಡಿ, ಟೀಹೌಸ್‌ಗಳಲ್ಲಿ ನಡೆದ ಹರಟೆಯಿಂದ ತಿಳಿದ ಸಮಾಚಾರವೆಂದರೆ, ಕ್ರಾಂತಿಕಾರರು ಪಟ್ಟಣ ಪ್ರವೇಶ ಮಾಡುವವರಿದ್ದರು. ಪ್ರಾವೆನ್‌ಷಿಯಲ್ ಕ್ಯಾಂಡಿಡೇಟಾಗಿದ್ದ ಚಾವೋ ಮಗ ಊರಿಗೆ ಬಂದದ್ದು ರಕ್ಷಣೆ ಪಡೆಯೋಕೇಂತ ಎಂದು ಮಿಸೆಸ್ ತ್ಸುವೋ ಆಲೋಚನೆ ಬೇರೆ ಇತ್ತು. ಅವಳ ಪ್ರಕಾರ ವಿಜೇತನಾದ ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್ ಸುಮ್ಮನೆ ಕೆಲವು ಹರಕಲು ಮುರುಕಲು ಪೆಟ್ಟಿಗೆಗಳನ್ನು ವೀಷುವಾಂಗ್‌ನಲ್ಲಿ ಇರಿಸಬೇಕೆಂದಿದ್ದ. ಆದರೆ ಚಾವೋ ಅವುಗಳನ್ನು ವಾಪಸ್ ಕಳಿಸಿಬಿಟ್ಟ. ನಿಜ ಹೇಳಬೇಕಾದರೆ ಚಾವೋ ಕುಟುಂಬದ ವಿಜೇತರಾದ ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್ ಮತ್ತು ಕೌಂಟಿ ಕ್ಯಾಂಡಿಡೇಟ್ ಇಬ್ಬರೂ ಒಬ್ಬರಿಗೊಬ್ಬರು ಮಾತಾಡುತ್ತಿರಲಿಲ್ಲ. ಹಾಗಿರುವಾಗ ಕಷ್ಟ ಸಮಯದಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುವುದಂತೂ ದೂರದ ಮಾತು. ಅಲ್ಲದೆ ತ್ಸುವೋ, ಚಾವೋನ ನೆರೆಯಾಕೆ ಆಗಿದ್ದುದರಿಂದ ಪಕ್ಕದ ಮನೇಲಿ ಏನು ನಡೀತಿದೆ ಅನ್ನೋದು ಚೆನ್ನಾಗಿ ಗೊತ್ತಾಗಿರಲೇಬೇಕು.

ಗಾಳಿ ಸುದ್ದಿ ಪರಿಣಾಮವಾಗಿ ಒಂದು ಮಾತಂತು ಗೊತ್ತಾಯಿತು. ವಿದ್ವಾಂಸ ತಾನೇ ಬರದಿದ್ದರೂ, ಚಾವೋ ಕುಟುಂಬದೊಂದಿಗೆ ತನ್ನ ಸಂಬಂಧ ಎಂಥಾದ್ದು ಅನ್ನೋದನ್ನ

ವಿವರಿಸಿ ಒಂದು ಪತ್ರ ಬರೆದಿದ್ದ. ಚಾವೋ ಯೋಚಿಸಿದ ಮೇಲೆ, ಇದರಿಂದ ತಮಗೇನೂ ತೊಂದರೆ ಇಲ್ಲಾಂತ ಭಾವಿಸಿ, ತನ್ನ ಹೆಂಡತಿಯ ಹಾಸಿಗೆ ಕೆಳಗೆ ಅವುಗಳನ್ನು ಮರೆಸಿ ಇಟ್ಟ. ಕ್ರಾಂತಿಕಾರರ ವಿಷಯ ಹೇಳುವುದಾದರೆ, ಜನರ ಮಾತಿನಂತೆ ಅವರು ಬಿಳಿ ಶಿರ ಸ್ತ್ರಾಣಗಳನ್ನು ಕವಚಗಳನ್ನು ಧರಿಸಿ ಆ ರಾತ್ರಿಯೇ, ಸತ್ತ ತಮ್ಮ ಚಕ್ರವರ್ತಿ ಚುಂಗ್‌ಚೆನ್‌ಗಾಗಿ ಶೋಕಾಚರಣೆ ನೆಪದಲ್ಲಿ ಪಟ್ಟಣ ಪ್ರವೇಶ ಮಾಡಿದರಂತೆ.

ಆಹ್‌ಕ್ಯೂ ಕ್ರಾಂತಿಕಾರರ ಬಗ್ಗೆ ಮೊದಲಿಂದಲೂ ಅರಿತಿದ್ದ. ತಾನೇ ಖುದ್ದಾಗಿ ತನ್ನ ಕಣ್ಣಿಂದ, ಅವನ ಶಿರಚ್ಛೇದ ಆಗುವುದನ್ನು ಕಂಡಿದ್ದ. ಕ್ರಾಂತಿಕಾರರು ಪ್ರತಿಭಟನಾಕಾರರೂ ಆಗಿದ್ದರು. ಅಲ್ಲದೆ ಅವರಿಂದ ತುಂಬ ತೊಂದರೇನೂ ಆಗುತ್ತೆ ಅಂತ ನಂಬಿದ್ದರಿಂದ, ಅವರಿಂದ ಯಾವಾಗಲೂ ದೂರವೇ ಇದ್ದ. ಆದರೆ ಯಾರಿಗೆ ಗೊತ್ತಿತ್ತು. ಸುಮಾರು ಮೂವತ್ತು ಮೈಲು ಆಸುಪಾಸಿನವರೆಗೂ ಸಾಕಷ್ಟು ಹೆಸರಾಗಿದ್ದ, ವಿಜೇತ ಪ್ರಾವೆನ್ಷಿಯಲ್ ಕ್ಯಾಂಡಿಡೇಟನ್ನು ಇಷ್ಟೊಂದು ಹೆದರಿಸ್ತಾರೇಂತ! ಆಹ್‌ಕ್ಯೂಗೆ ಇದೆಲ್ಲ ಮೈ ಮರೆಯುವ ಹಾಗೆ ಮಾಡಿತು. ಇದರ ಜೊತೆಗೆ ಊರಿನವರ ಭಯ ಅವನ ಸಂತೋಷವನ್ನು ಇನ್ನಷ್ಟು ಹೆಚ್ಚಿಸಿತು.

"ಕ್ರಾಂತಿ ಅಂದರೆ ಕೆಟ್ಟದ್ದೇನೂ ಅಲ್ಲ" ಆಹ್‌ಕ್ಯೂಗೆ ಅನಿಸಿತು. ಎಲ್ಲರನ್ನೂ ಮುಗಿಸಿಬಿಡಬೇಕು.... ಹಿಡಿ ಶಾಪ ಹಾಕಬೇಕು. ನನಗಂತೂ ಕ್ರಾಂತಿಕಾರರ ಬಳಿಗೆ ನಾನೇ ಖುದ್ದಾಗಿ ಹೋಗಬೇಕು ಅಂತ ಅನ್ನಿಸುತ್ತೆ!"

ಆಹ್‌ಕ್ಯೂ ಈಗ ಸ್ವಲ್ಪ ದಿನದಿಂದೀಚೆಗೆ ಗಟ್ಟಿಗೊಂಡಿದ್ದ. ಪಾಪ ಅಸಂತೃಪ್ತನೂ ಆಗಿದ್ದ. ಅದರ ಜೊತೆಗೆ ಬರಿ ಹೊಟ್ಟೇಲಿ ಒಂದೆರಡು ಬಟ್ಟಲು ಹೆಂಡಾನೂ ಇಳಿಸಿದ್ದ. ಪರಿಣಾಮವಾಗಿ ಕುಡುಕನಾದ. ಗಾಳೀಲಿ ಎಲ್ಲೋ ತೇಲುತ್ತಿರುವಂತೆ ಭಾವಿಸಿ ನಡೆದ. ಇದ್ದಕ್ಕಿದ್ದಂತೆ ವಿಚಿತ್ರವಾಗಿ ಅವನು ತನ್ನನ್ನೇ ಕ್ರಾಂತಿಕಾರಿ ಅಂತ ಭಾವಿಸಿಕೊಂಡ. ವೀಷುವಾಂಗ್‌ನ ಜನವೆಲ್ಲ ತನ್ನ ಸೆರೆಯಾಳುಗಳು ಅಂದುಕೊಂಡ. ತನ್ನ ಮೇಲೆ ನಿಯಂತ್ರಣ ತಪ್ಪಿ ಜೋರಾಗಿ ಕಿರುಚಿದ.

"ದಂಗೆ! ದಂಗೆ!"

ಅಲ್ಲಿದ್ದ ಊರಿನ ಜನವೆಲ್ಲ ಇದನ್ನು ಕೇಳಿ ಭಯಭ್ರಾಂತರಾಗಿ ನೋಡಿದರು. ಇಲ್ಲಿವರೆಗೆ ಅವರ ಕಣ್ಣುಗಳಲ್ಲಿ ಇಂತಹ ದಯನೀಯ ನೋಟವನ್ನು ನೋಡಿರಲಿಲ್ಲ.

ಇದನ್ನು ನೋಡಿದಾಗ ಅವನಿಗೆ ಬೇಸಿಗೆಯಲ್ಲಿ ತಂಪಾದ ಪಾನೀಯವನ್ನು ಕುಡಿದು ಹಾಯೆನಿಸದ ಹಾಗೆ ಆಯಿತು. ಇದರಿಂದ ಇನ್ನಷ್ಟು ಖುಷಿಪಡುತ್ತ, ಕಿರುಚುತ್ತ ಹೆಜ್ಜೆ ಹಾಕಿದ :-

"ಸರಿ, ನನಗೆ ಇಷ್ಟ ಬಂದದ್ದನ್ನು ತೊಗೋತೀನಿ. ನನಗೆ ಬೇಕಾದವರನ್ನು ಪ್ರೀತಿಸ್ತೇನೆ. ಲಾ! ಲ ಲಾ!

ಮರೆತು ಕೊಂದ ನನ್ನ ಸೋದರರನ ಕೊಲೆಗಾಗಿ ಪಶ್ಚಾತ್ತಾಪ ಪಡುತ್ತೇನೆ.

ಕೊಂದಿದ್ದಕ್ಕಾಗಿ ಪರಿತಪಿಸುತ್ತೇನೆ.

ತ್ರಾ ಲಾ! ತ್ರಾ ಲಾ! ತುಂ ತಿ ತುಮ್! ತುಮ್!

ಉಕ್ಕಿನ ದಂಡದಿಂದ ತಲೆ ಒಡೆಯುತ್ತೇನೆ"

ಚಾವೋ ಮತ್ತು ಅವನ ಇಬ್ಬರು ಮಕ್ಕಳು, ತಮ್ಮ ಒಂದಿಬ್ಬರು ಬಂಧುಗಳೊಂದಿಗೆ, ಕ್ರಾಂತಿ ಬಗ್ಗೆ ಮಾತಾಡುತ್ತಾ ನಿಂತಿದ್ದರು. ಆಹ್‌ಕ್ಯೂ ಅವರು ನಿಂತಿದ್ದನ್ನು ಗಮನಿಸದೆ, ಟ್ರಾ ಲಾ ಲಾ ತುಮ್ ತಿ ತುಮ್! ಎಂದು ಹಾಡುತ್ತ ತಲೆ ಎತ್ತಿಕೊಂಡು ದಾಟಿ ಹೋದ.

"ಕ್ಯೂ! ಓಲ್ಡ್ ಚ್ಯಾಪ್!" ಹೆದರಿದ ಸಣ್ಣ ದನಿಯಲ್ಲಿ ಚಾವೋ ಕರೆದ. ಆಹ್‌ಕ್ಯೂ ಟ್ರಾ ಲಾ ಮತ್ತೆ ಹಾಡಿದ. ಓಲ್ಡ್ ಚ್ಯಾಪ್ ಅನ್ನುವುದರ ಜೊತೆ ತನ್ನ ಹೆಸರು ಸೇರಿರುತ್ತೆ ಅನ್ನುವುದನ್ನು ಊಹಿಸಲಾರದವನಾಗಿದ್ದ. ಅದಕ್ಕೆಂದೇ ಓಲ್ಡ್ ಚ್ಯಾಪ್ ಅಂತ ಕರೆದದ್ದು ತನ್ನನ್ನಲ್ಲವೆಂದು ತಿಳಿದು, ತನ್ನ ಪಾಡಿಗೆ ತಾನು ಹಾಡುತ್ತ ನಡೆದ.

ಕ್ಯೂ, ಓಲ್ಡ್ ಚ್ಯಾಪ್

"ಕೊಂದದ್ದಕ್ಕೆ ನಾನು ಪರಿತಪಿಸುತ್ತೇನೆ"

"ಆಹ್‌ಕ್ಯೂ" ಚಾವೋನ ಮಗ, ಹೆಸರಿಡಿದು ಕರೆಯಬೇಕಾಯಿತು.

ಆಗ ಮಾತ್ರ ಅಹ್‌ಕ್ಯೂ ನಿಂತ. ಚೆನ್ನಾಗಿದ್ದೀರಾ? ಒಂದು ಕಡೆಗೆ ತಲೆ ತಿರುಗಿಸಿ ಕೇಳಿದ.

"ಕ್ಯೂ! ಓಲ್ಡ್ ಚ್ಯಾಪ್..." ಈಗ .... ಚಾವೋಗೆ ಮುಂದೆ ಏನು ಮಾತಾಡಬೇಕೋ ತಿಳಿಯಲಿಲ್ಲ. "ಏನಪ್ಪ, ಬಹಳ ಶ್ರೀಮಂತನಾಗ್ತಿದ್ದೀಯ ಇತ್ತೀಚೆಗೆ?"

"ಶ್ರೀಮಂತನೇ? ಹೌದು! ನನಗೇನು ಇಷ್ಟವೋ ಅದನ್ನು ನಾನು ತೆಗೆದುಕೊಳ್ತೇನೆ"

ಆಹ್‌ಕ್ಯೂ, "ಓಲ್ಡ್ ಮ್ಯಾನ್, ನಮ್ಮಂತಹ ಬಡವರು ನಿನಗೆ ಲೆಕ್ಕಕ್ಕೇ ಇಲ್ಲ..." ಚಾವೋ ಪೈಯೆನ್ ಅನುಮಾನದಿಂದಲೇ ಹೇಳಿದ. ಕ್ರಾಂತಿಕಾರರ ಮನೋಧರ್ಮವನ್ನು ಧ್ವನಿಸುವಂತೆ.

"ಬಡ ಸ್ನೇಹಿತರು!.... ನನಗಿಂತ ನೀವೇ ಶ್ರೀಮಂತರು ಅನ್ನುವುದು ಸತ್ಯವಾದ ಮಾತು. ಆಹ್ ಈ ಮಾತು ಹೇಳಿ ಮುಂದೆ ನಡೆದು ಬಿಟ್ಟ.

ಅವರು ನಿರಾಶೆ ಮತ್ತು ನಿರ್ವಾಕ್ಕಾಗಿ ನಿಂತರು. ಚಾವೋ ಮತ್ತು ಮಗ ಮನೆಗೆ ಹಿಂತಿರುಗಿ ಆ ದಿನ ಸಂಜೆಯಿಂದ ಕತ್ತಲಾಗುವವರೆಗೆ ಪ್ರಶ್ನೆ ಕುರಿತು ಚರ್ಚಿಸಿದರು. ಚಾವೋ ಪೈಯೆನ್ ಮನೆಗೆ ಹಿಂತಿರುಗಿದ ಮೇಲೆ ತನ್ನ ಪರ್ಸನ್ನು ಹೆಂಡತಿ ಕೈಗಿತ್ತು, ಒಳಗೆಲ್ಲಾದರೂ ಮುಚ್ಚಿಡಲು ಹೇಳಿದ.

ಸ್ವಲ್ಪ ಹೊತ್ತು ಆಹ್‌ಕ್ಯೂ ಗಾಳೀಲಿ ನಡೀತಿರೋ ಹಾಗೇ ಇದ್ದರೂ ತನ್ನ ರಕ್ಷಕ ದೇವರ ಗುಡಿ ತಲುಪಿದಾಗ ಮಾಮೂಲಿ ಸ್ಥಿತಿಗೆ ಬಂದಿದ್ದ. ಆ ದಿನ ಸಂಜೆ ಗುಡಿಯ ಮುದುಕ ಎಂದೂ ಇಲ್ಲದಂತೆ ತೀರಾ ಸ್ನೇಹಿತನಂತೆ ನಡೆದುಕೊಂಡ; ಅವನಿಗೆ ಚಹಾ ಸಹ ನೀಡಿದ. ನಂತರ ಆಹ್‌ಕ್ಯೂ ಎರಡು ತೆಳ್ಳನೆ ರೊಟ್ಟಿ ಕೇಳಿದ. ಅದನ್ನು ತಿಂದ ಮೇಲೆ ಬಳಸಿದ್ದ ನಾಲ್ಕು ಔನ್ಸಿನ ಕ್ಯಾಂಡಲ್ ಮತ್ತು ಕ್ಯಾಂಡಲ್ ಸ್ಟಿಕ್ಕನ್ನು ಕೇಳಿದ. ಕ್ಯಾಂಡಲ್ ಉರಿಸಿ, ತನ್ನ ಪುಟ್ಟ ಕೋಣೆಯಲ್ಲಿ ತಾನೊಬ್ಬನೇ ಮಲಗಿದ. ಆ ದಿನ ಅವನು ಎಂದೂ ಇಲ್ಲದಷ್ಟು ಸಂತೋಷವಾಗಿದ್ದ. ಗಾಳಿಗೆ ತೂರಾಡುತ್ತಿದ್ದ ಉರಿದ ಕ್ಯಾಂಡಲ್ ಜ್ವಾಲೆಯು ಲಾಂಟೆರ್ನ್ ಹಬ್ಬದ ದಿನ ಅಲುಗಾಡುವಂತೆ ಕಾಣುತ್ತಿತ್ತು. ಅವನ ಕಲ್ಪನೆ ಎಲ್ಲೋ! ಅದರ ಜೊತೆಗೆ ಅವನೂ ಯಾವುದೋ ಲೋಕದಲ್ಲಿದ್ದ. ದಂಗೆ! ಎಷ್ಟು ತಮಾಶೆಯಾಗಿರುತ್ತೆ! ಕ್ರಾಂತಿಕಾರರು ಬಿಳಿ ಹೆಲ್ಮೆಟ್, ಬಿಳಿ ಕವಚ, ಕೈಯಲ್ಲಿ ಕತ್ತಿಗಳು, ಉಕ್ಕಿನ ದಂಡಗಳು, ಬಾಂಬುಗಳು, ವಿದೇಶಿ ಬಂದೂಕು, ಎರಡು ಕಡೆ ಧಾರೆಯಿರುವ ಚಾಕು, ಭಲ್ಲೆ ಭರ್ಚಿಗಳು... ಇವುಗಳನ್ನೆಲ್ಲಾ ಹಿಡಿದುಕೊಂಡು ಬರ್ತಾರೆ... ಅವರೆಲ್ಲ ಈ ರಕ್ಷಕ ದೇವರ ಗುಡಿ ಬಳಿ ಬಂದು ಕರೀತಾರೆ!... ಆಹ್‌ಕ್ಯೂ! ಬಾ ನಂಜೊತೆ! ... ಆಹ್ ಕ್ಯೂ! ಬಾ ನಂಜೊತೆ!... ಆಗ ನಾನು ಅವರು ಜೊತೆ ಹೋಗ್ತೀನಿ...

"ಆಗ ಊರಿನವರೆಲ್ಲ ನಗು ಬರುವ ಹಾಗೆ, ದೈನ್ಯವಾಗಿ ನನ್ನ ಮುಂದೆ ಮೊಣಕಾಲೂರಿ, ಆಹ್‌ಕ್ಯೂ! ನಮ್ಮನ್ನು ಬಿಟ್ಟುಬಿಡು!" ಎಂದು ಯಾಚಿಸುತ್ತಾರೆ. ಆದರೆ ಅವರ ಮಾತನ್ನು ಯಾರು ತಾನೇ ಕೇಳ್ತಾರೆ! ಸಾಯುವವರಲ್ಲಿ ಮೊದಲಿಗರೆಂದರೆ,

ಯಂಗ್‌ಡಿ ಮತ್ತು ಚಾವೋ. ಆಮೇಲೆ ವಿಜೇತನಾದ ಕೌಂಟಿ ಕ್ಯಾಂಡಿಡೇಟ್.... ವಿದೇಶಿ ಅನುಕರಣೆ ಪಿಶಾಚಿ... ಒಂದಷ್ಟು ಜನಾನ ಸಾಧ್ಯವಾದರೆ ಬಿಡಬಹುದಾಗಿತ್ತೇನೋ, ವಿಸ್ಕರ್ಸ್‌ವ್ಯಾಂಗ್‌ನ ಒಂದು ಸಲ ಬಿಟ್ಟಿದ್ದೆ... ಆದರೆ ಈಗ ಮಾತ್ರ ಹಾಗಲ್ಲ...

"ಸಾಮಾನುಗಳು... ಮೊದಲು ನೆಟ್ಟಗೆ ಆ ಪೆಟ್ಟಿಗೆಗಳ ಹತ್ತಿರ ಹೋಗ್ತೀನಿ... ಬೆಳ್ಳಿ ನಾಣ್ಯ ವಿದೇಶಿ ನಾಣ್ಯ, ವಿದೇಶಿ ಕ್ಯಾಲಿಕೋ ಜಾಕೆಟ್ಸ್. ಮೊದಲಿಗೆ ಕೌಂಟಿ ಕ್ಯಾಂಡಿಡೇಟ್ ಹೆಂಡತಿ ಹಾಸಿಗೇನ ಗುಡಿಗೆ ಸಾಗಿಸ್ತೀನಿ, ಆಮೇಲೆ ಚಿಯೆನ್ ಮನೆಯ ಮೇಜು ಕುರ್ಚಿಗಳನ್ನು ಇಲ್ಲವೆ ಚಾವೋ ಮನೆದನ್ನ ಉಪಯೋಗಿಸಿಕೊಳ್ತೇನೆ. ನಾನಂತು ಒಂದು ಚೂರು ಕೆಲಸ ಮಾಡೊಲ್ಲ. ಒಂದು ಕಡ್ಡಿ ಕೂಡ ಕದಲಿಸೊಲ್ಲ. ಯಂಗ್‌ಡಿ ಕೈಯಲ್ಲಿಯೇ ಎಲ್ಲವನ್ನೂ ಮಾಡಿಸ್ತೀನಿ. ನನ್ನ ಕೈಯೇಟಿನ ರುಚಿ ಬೇಡವಾದರೆ ಅಚ್ಚುಕಟ್ಟಾಗಿ ಮಾಡು ಅಂತೀನಿ.

ಚಾವೋ ಘುಚೆನ್‌ನ ತಂಗಿ ನೋಡೋಕೆ ಕೆಟ್ಟದಾಗಿದ್ದಾಳೆ. ಮಿಸೆಸ್ ತ್ಸುವೋ ಮಗಳನ್ನು ಸ್ವಲ್ಪ ದಿನ ಆದಮೇಲೆ ಯೋಚನೆ ಮಾಡಬಹುದು. ವಿದೇಶಿ ಅನುಕರಣೆ ಪಿಶಾಚಿ ಹೆಂಡತಿ ಪಿಗ್‌ಟೈಲ್ ಇಲ್ಲದಿರುವ ಗಂಡಸಿನ ಜೊತೆ ಮಲಗೋಕೆ ರೆಡಿಯಾಗಿದ್ದಾಳೆ! ಛೀ! ಛಿ! ಆಕೆ ಒಳ್ಳೆ ಹೆಂಗಸಾಗಿರಲು ಸಾಧ್ಯವಿಲ್ಲ! ಕೌಂಟಿ ಕ್ಯಾಂಡಿಡೇಟ್ ಹೆಂಡತಿಯ ಕಣ್ಣುರೆಪ್ಪೆಗಳ ಮೇಲೆ ಕಲೆಗಳಿವೆ. ಅಮಾಹ್‌ವೂನ ನೋಡಿ ಬಹಳ ದಿನ ಆಯಿತು. ಅವಳು ಎಲ್ಲಿದ್ದಾಳೋ ಗೊತ್ತಿಲ್ಲ. ಆದರೆ ಅಯ್ಯೋ ಅವಳ ಪಾದಗಳು, ಹಾಳಾದ್ದು ಎಷ್ಟು ದೊಡ್ಡವು!

ಒಂದು ಸರಿಯಾದ ನಿರ್ಧಾರಕ್ಕೆ ಬರುವ ಮೊದಲೇ ಗೊರಕೆಗೆ ಇಳಿದಿದ್ದ. ನಾಲ್ಕು ಔನ್ಸಿನ ಕ್ಯಾಂಡಲ್ ಉರಿದು ಉರಿದು ಅರ್ಧ ಅಂಗುಲದಷ್ಟು ಮಾತ್ರ ಉಳಿದಿತ್ತು. ಹೊಯ್ದಾಡುತ್ತಿದ್ದ ಜ್ವಾಲೆ ಅವನ ತೆರೆದ ಬಾಯನ್ನು ಮಾತ್ರ ಬೆಳಗಿಸಿತ್ತು.

"ಹೋ! ಹೋ!... ಬೊಬ್ಬೆಯಿಡುತ್ತ ಎದ್ದು ಸುತ್ತಲೂ ಗಾಭರಿಯಿಂದ ನೋಡಿದ. ನಾಲ್ಕು ಔನ್ಸಿನ ಕ್ಯಾಂಡಲ್ ಅನ್ನು ನೋಡಿದವನೇ ಮತ್ತೆ ನಿದ್ದೆಗೆ ಉರುಳಿದ.

ಮಾರನೇ ದಿನ ಬೆಳಿಗ್ಗೆ ತಡವಾಗಿ ಎದ್ದ. ಹೊರಗೆ ಹೊರಟಾಗ, ಬೀದಿಯಲ್ಲಿ ಎಲ್ಲವೂ ಮಾಮೂಲಿನಂತೆ ಇತ್ತು. ಅವನಿಗೆ ಹಸಿವಾಗಿತ್ತು. ತಲೆ ಕೆರೆದುಕೊಂಡರೂ ಏನು ಮಾಡಬೇಕೆಂದು ಹೋಳೀಲಿಲ್ಲ. ನಂತರ ಇದ್ದಕ್ಕಿದ್ದಂತೆ ಅವನ ತಲೇಲಿ ಏನೋ

ಹೊಳೆದಂತಾಗಿ ನಿಧಾನವಾಗಿ ಹೆಜ್ಜೆ ಹಾಕಿದ. ಉದ್ದೇಶ ಪೂರ್ವಕವೋ, ಆಕಸ್ಮಿಕವೋ, ನಡೆದು ಕಡೆಗೆ ಕ್ವಯಟ್ ಸೆಲ್ಫ್ ಇಂಪ್ರೂವ್‌ಮೆಂಟ್ ಕಾನ್ವೆಂಟನ್ನು ತಲುಪಿದ.

ಹಿಂದೊಮ್ಮೆ ವಸಂತಮಾಸದಲ್ಲಿ ಹೋಗಿದ್ದಾಗ ಹೇಗೆ ಪ್ರಶಾಂತವಾಗಿ ಇತ್ತೋ, ಹಾಗೇ ಈಗಲೂ ಪ್ರಶಾಂತವಾಗಿತ್ತು. ಬಿಳಿ ಗೋಡೆಗಳು, ಕಪ್ಪು ಹೆಬ್ಬಾಗಿಲು, ಸ್ವಲ್ಪ ಹೊತ್ತು ಯೋಚಿಸಿದ ನಂತರ ಗೇಟಿನ ಮೇಲೆ ಸದ್ದು ಮಾಡಿದ. ಇದರಿಂದ ನಾಯಿ ಒಳಗಿಂದಲೇ ಬೊಗಳಿತು. ಬೇಗ ಬೇಗ ಹೋಗಿ ಒಂದಷ್ಟು ಹೆಂಟೆಗಳನ್ನು ಎತ್ತಿಕೊಂಡು ಮತ್ತೆ ಗೇಟಿನ ಮೇಲೆ ಎಸೆದು, ಅವುಗಳಿಂದ ಗೇಟಿನ ಬಾಗಿಲ ಮೇಲೆ ಗುಳಿಗಳು ಕಾಣಿಸಿಕೊಳ್ಳುವವರೆಗೂ ಬೀಸಿದ. ಕಡೆಗೆ ಯಾರೋ ಬಂದು ಬಾಗಿಲು ತೆಗೆಯುವ ಸದ್ದನ್ನು ಕೇಳಿದ.

ಮುರಿದ ಇಟ್ಟಿಗೆ ಚೂರನ್ನು ಕೈಲಿ ಹಿಡಿದು ಕಾಲುಗಳನ್ನು ಅಗಲಿಸಿ, ನಾಯಿ ಜೊತೆ ಕುಸ್ತಿ ಮಾಡಲು ಸಿದ್ಧನಾಗಿ ನಿಂತ. ಕಾನ್ವೆಂಟ್ ಬಾಗಿಲು ಸದ್ದು ಮಾಡುತ್ತ ತೆರೆದುಕೊಂಡಿತಾದರೂ ಕಪ್ಪು ನಾಯಿ ಹೊರಗೆ ಬರಲಿಲ್ಲ. ಒಳಗೆಲ್ಲ ನೋಡಿದಾಗ, ಅವನ ಕಣ್ಣಿಗೆ ಬಿದ್ದದ್ದು ಹಿಂದೆ ಕಂಡಿದ್ದ ಸನ್ಯಾಸಿನಿ.

"ಮತ್ತೆ ಯಾಕೆ ಇಲ್ಲಿ ಬಂದಿದ್ದೀಯ!" ಆಶ್ಚರ್ಯದಿಂದ ಕೇಳಿದಳು.

"ದಂಗೆ, ದಂಗೆ ಎದ್ದಿದೆ. ಗೊತ್ತಿಲ್ಲ ನಿನಗೆ?" ಆಹ್ ಕ್ಯೂ ಅಸ್ಪಷ್ಟವಾಗಿ ಹೇಳಿದ.

"ದಂಗೆ! ಕ್ರಾಂತಿ! ಈಗಾಗಲೇ ಒಂದು ಮುಗೀತಲ್ಲ?" ಅತ್ತು ಕೆಂಪಾದ ಕಣ್ಣುಗಳಿಂದ ನುಡಿದಳು ಸನ್ಯಾಸಿನಿ. "ನಿನ್ನ ಕ್ರಾಂತಿಯಿಂದ ನಾವೇನಾಗ್ತೀವೀಂತ ಗೊತ್ತೇನು?"

"ಏನು?" ಆಶ್ಚರ್ಯದಿಂದ ಕೇಳಿದ ಆಹ್‌ಕ್ಯೂ.

"ನಿನಗೆ ಗೊತ್ತಾಗಲಿಲ್ಲವೇನು? ದಂಗೆ ಕೋರರು ಈಗಾಗಲೇ ಇಲ್ಲಿದ್ದಾರೆ"

"ಯಾರು?" ಇನ್ನಷ್ಟು ಆಶ್ಚರ್ಯದಿಂದ ಕೇಳಿದ.

"ಕೌಂಟಿ ಕ್ಯಾಂಡಿಡೇಟ್ ಮತ್ತು ಇಮಿಟೇಷನ್ ಫಾರಿನ್ ಡೆವಿಲ್"

ಆಹ್‌ಕ್ಯೂಗೆ ಇದು ಇನ್ನೂ ಆಶ್ಚರ್ಯದ ಸಂಗತಿಯಾಗಿತ್ತು. ಅಪ್ರತಿಭನಾಗದೆ ಇರುವುದು ಸಾಧ್ಯವೇ ಇರಲಿಲ್ಲ. ಕ್ರೈಸ್ತ ಸನ್ಯಾಸಿನಿ ಆಹ್‌ಕ್ಯೂ ತನ್ನ ಮೊದಲಿನ ಜರ್ಬನ್ನು

ಕಳೆದುಕೊಂಡಿರುವುದನ್ನು ಗಮನಿಸಿ ಗೇಟು ಮುಚ್ಚಿಕೊಂಡಳು. ಆಹ್‌ಕ್ಯೂ ಮತ್ತೆ ತಳ್ಳಿದಾಗ ಬಾರದಿರುವಂತೆ ಚಿಲಕ ಹಾಕಿದಳು. ಆಹ್‌ಕ್ಯೂ ಗೇಟನ್ನು ತಳ್ಳಲು ಪ್ರಯತ್ನಿಸಿದಾಗ ಅದು ಒಂದಿಷ್ಟೂ ಕದಲದೆ ಹೋದಾಗ ಮತ್ತೊಮ್ಮೆ ಬಾಗಿಲು ಸದ್ದು ಮಾಡಿದ. ಆದರೆ ಯಾರೂ ಅದಕ್ಕೆ ಉತ್ತರಿಸಲಿಲ್ಲ.

ಇದೆಲ್ಲ ನಡೆದದ್ದು ಆ ದಿನ ಬೆಳಿಗ್ಗೆ. ಚಾವೋ ಮನೆಯ ಕೌಂಟಿ ಕ್ಯಾಂಡಿಡೇಟ್ ನಡೆದದ್ದೆಲ್ಲವನ್ನೂ ಕೇಳಿದ. ಕೇಳಿದ ಕ್ಷಣವೇ ಅವನಿಗೆ ಗೊತ್ತಾಯಿತು, ದಂಗೆಕೋರರು ಆ ರಾತ್ರಿಯೇ ಪಟ್ಟಣದೊಳಕ್ಕೆ ನುಗ್ಗಿದ್ದಾರೆ ಎಂದು. ತಕ್ಷಣವೇ ತನ್ನ ಜುಟ್ಟನ್ನು ಮೇಲಕ್ಕೆ ಎತ್ತಿ ಕಟ್ಟಿದ ಮತ್ತು ಮೊದಲಿಗೆ ಇಮಿಟೇಷನ್ ಫಾರೆನ್ ಡೆವಿಲ್ ನನ್ನು ನೋಡಲು ಹೋದ. ಈ ಮುಂದೆ ಅವರಿಬ್ಬರ ನಡುವೆ ಮಾತುಕತೆ ಇರಲಿಲ್ಲವಾದರೂ ಈಗ ಎಲ್ಲರೂ ಒಟ್ಟಿಗೆ ಸೇರಿ ಸುದಾರಣೆಗಳನ್ನು ತರಬೇಕಾದ ಸಮಯ ಬಂದಿದ್ದರಿಂದ, ತಾನೇ ಹೋಗಿ ಅವನೊಂದಿಗೆ ಸಂತೋಷವಾಗಿ ಮಾತನಾಡಿದ. ಮತ್ತು ಒಳ್ಳೆಯ ಗೆಳೆಯನೂ ಆದ. ಇಬ್ಬರೂ ಒಬ್ಬರ ಕಣ್ಣಲ್ಲಿ ಒಬ್ಬರು ಕಣ್ಣಿಟ್ಟು ದಂಗೆಕೋರರೂ, ಕ್ರಾಂತಿಕಾರರೂ ಆಗಲು ಪ್ರತಿಜ್ಞೆ ಮಾಡಿದರು.

ತುಂಬಾ ಹೊತ್ತು ಯೋಚನೆ ಮಾಡಿದ ಮೇಲೆ, ಕ್ವಯೆಟ್ ಸೆಲ್ಫ್ ಇಂಪ್ರೂವ್‌ಮೆಂಟ್ ಕಾನ್ವೆಂಟಿನಲ್ಲಿ ಚಕ್ರವರ್ತಿ ಚಿರಾಯುವಾಗಲಿ ಎಂದು ಬರೆಯಲಾಗಿತ್ತು. ಮೊದಲು ಅದನ್ನು ನಾಶಪಡಿಸಬೇಕು ಎಂದುಕೊಂಡದ್ದೆ ಕೂಡಲೇ ಕಾನ್ವೆಂಟಿನ ಬಳಿಗೆ ನಡೆದು ಕಾರ್ಯ ಪ್ರವೃತ್ತರಾದರು. ಆ ಕ್ರೈಸ್ತ ಸನ್ಯಾಸಿನಿಯೊಬ್ಬಳು ಅವರನ್ನು ತಡೆಯಬೇಕು, ಅವರಿಗೆ ಬುದ್ಧಿವಾದ ಹೇಳಬೇಕು ಎಂದುಕೊಂಡಳು. ಅವರು ಅವಳನ್ನು ಚಿಂಗ್ ಸರಕಾರವೆಂದು ಭಾವಿಸಿ, ತಲೆಗೆ ಬಲವಾದ ಪೆಟ್ಟು ನೀಡಿದರು. ಅಲ್ಲದೆ ಹತ್ತಾರು ಬಾರಿ ಅವಳನ್ನು ಕೋಲಿನಿಂದ ಮತ್ತು ಗೆಣ್ಣುಗಳಿಂದ ಹೊಡೆದರು. ಆ ಸನ್ಯಾಸಿನಿ ಅವರಿಂದ ಬಿಡಿಸಿಕೊಂಡು, ಅವರು ಹೋದ ಮೇಲೆ ಸುತ್ತಲೂ ಪರೀಕ್ಷಿಸಿದಳು. ರಾಜಫಲಕವನ್ನು ತುಂಡು ತುಂಡು ಮಾಡಿ ಎಸೆಯಲಾಗಿತ್ತು. ಮತ್ತು ಅಮೂಲ್ಯವಾದ ಸುವಾನ್ ತೆ ಸೆನ್ಸರ್, ಕರುಣೆಯ ದೇವತೆ ಕುವಾನ್‌ಯಿನ್ ಪ್ರತಿಮೆಯ ಮುಂದೆ ಇದ್ದುದನ್ನು ಅದೃಶ್ಯ ಮಾಡಿದ್ದರು.

ಆಹ್‌ಕ್ಯೂಗೆ ಇದೆಲ್ಲ ಆಮೇಲೆ ಗೊತ್ತಾಯಿತು. ಇದೆಲ್ಲ ನಡೆದಾಗ ತಾನು ದೀರ್ಘ ನಿದ್ದೆಯುಲ್ಲಿ ಇದ್ದುದನ್ನು ನೆನೆದು ಶಪಿಸಿಕೊಂಡ. ಅವರು ಬಂದು ತನ್ನನ್ನು

ಕರೆಯದಿದ್ದುದಕ್ಕಾಗಿ ಕೋಪ ಮಾಡಿಕೊಂಡ. ಕಡೆಗೆ, "ಬಹುಶಃ ನಾನೂ ದಂಗೆಕೋರನಗಿರುವುದು ಅವರಿಗೆ ಗೊತ್ತಿಲ್ಲ ಅಂತ ಕಾಣುತ್ತೆ" ಎಂದು ತನ್ನಲ್ಲಿಯೇ ಹೇಳಿಕೊಂಡು ಸಮಾಧಾನ ಪಟ್ಟ.

# ಅಧ್ಯಾಯ - ೮

## ಕ್ರಾಂತಿಯಿಂದ ಹೊರಗೆ

ದಿನದಿನಕ್ಕೆ ವಿಷುವಾಂಗ್ ಜನಕ್ಕೆ ಹೆಚ್ಚಿನ ಭರವಸೆ ಮತ್ತು ಧೈರ್ಯ ಮೂಡಿತು. ಅವರಿಗೆ ಬಂದ ಸುದ್ದಿಯಿಂದ, ಕ್ರಾಂತಿಕಾರರು ಪಟ್ಟಣ ತಲುಪಿದ್ದರೂ, ಅವರ ಬರವಿನಿಂದ ಅಂತಹ ವ್ಯತ್ಯಾಸಗಳೇನೂ ಆಗದಿದ್ದುದು ಅವರಿಗೆ ಗೊತ್ತಾಯಿತು. ಮ್ಯಾಜಿಷ್ಟ್ರೇಟ್ ಸ್ಥಾನದಲ್ಲಿ ಏನೂ ವ್ಯತ್ಯಾಸವಾಗಿರಲಿಲ್ಲ. ಆದರೆ ಹೆಸರು ಮಾತ್ರ ಬದಲಾಗಿತ್ತು. ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್‌ಗೂ ಯಾವುದೋ ಒಂದು ಪೋಸ್ಟ್ ಸಿಕ್ಕಿತ್ತು. ವೀಷುವಾಂಗ್ ಜನಕ್ಕೆ ಈ ಹೆಸರುಗಳೆಲ್ಲ ಅಷ್ಟಾಗಿ ನೆನಪಿರೋದಿಲ್ಲ. ಅವರಿಗೆ ಅವೆಲ್ಲ ಏನಿದ್ದರೂ ಒಂದು ಥರಾ ಸರಕಾರಿ ಅಧಿಕಾರ ಅಷ್ಟೇ! ಮಿಲಿಟರಿ ಅಧಿಕಾರಿ ಮೊದಲಿನ ಹಾಗೆ ಕ್ಯಾಪ್ಟನ್ ಎಂದೇ ಇದೆ. ಹೆದರಲು ಒಂದೇ ಒಂದು ಕಾರಣ ಅಂದ್ರೆ ಬಂದ ಕ್ರಾಂತಿಕಾರರು, ಎಲ್ಲರ ಜುಟ್ಟುಗಳನ್ನು ಕತ್ತರಿಸಿದ್ದು. "ಸೆವೆನ್ ಪೌಂಡರ್" ಅಂತ ಕರೀತಿದ್ದ ದೋಣಿ ಚಾಲಕ ಇವರ ಕೈಗೆ ಬಿದ್ದು, ನೋಡೋಕೆ ಆಗದ ಹಾಗೆ, ರೂಪ ಕೆಡಿಸಿದ್ದರು ಅಂತ ಹೇಳುತ್ತಿದ್ದರು. ಆದರೆ ವೀಷುವಾಂಗ್ ಜನಕ್ಕೆ ಇಂಥ ಭಯವೇನೂ ಇರಲಿಲ್ಲ. ಯಾಕೇಂದ್ರೆ ಅವರು ಪಟ್ಟಣಕ್ಕೇ ಹೋಗುತ್ತಿರಲಿಲ್ಲ. ಆಕಸ್ಮಾತ್ ಹೋಗಬೇಕೂಂತ ಯೋಚ್ನೆ ಮಾಡುತ್ತಿದ್ದವರೂ ಕೂಡ ಹೋಗೋದನ್ನ ತಪ್ಪಿಸಿದರು, ಸುಮ್ಮನೆ ಅಪಾಯಕ್ಕೆ ಸಿಗುವುದು ಬೇಡಾಂತ. ಆಹ್‌ಕ್ಯೂ ತನ್ನ ಹಳೆ ಸ್ನೇಹಿತರನ್ನು ನೋಡಿ ಬರಲು ಪಟ್ಟಣಕ್ಕೆ ಹೋಗಲು ಯೋಚಿಸುತ್ತಿದ್ದ. ಅವನಿಗೆ ಇದೆಲ್ಲ ಸುದ್ದಿ ತಿಳಿದ ಮೇಲೆ, ಆಸೆ ಬಿಟ್ಟು, ಹೋಗುವ ಆಲೋಚನೆಯಿಂದ ಕೈತೊಳೆದುಕೊಂಡ.

ವೀಷುವಾಂಗ್‌ನಲ್ಲಿ ಏನೂ ಸುಧಾರಣೆ ಆಗಲಿಲ್ಲ ಅಂತ ಹೇಳಿದರೆ ತಪ್ಪಾಗುತ್ತೆ. ಮುಂದಿನ ಕೆಲವು ದಿನಗಳಲ್ಲಿ, ತಮ್ಮ ಜುಟ್ಟನ್ನು (ಪಿಗ್‌ಟೈಲ್) ಸುರುಳಿ ಸುತ್ತಿ ತಲೆಮೇಲೆ ಇರಿಸಿಕೊಂಡವರ ಸಂಖ್ಯೆ ಹೆಚ್ಚಿತು. ಇದರಲ್ಲಿ ಕೌಂಟಿ ಕ್ಯಾಂಡಿಡೇಟೇ ಮೊದಲಿಗನಾಗಿದ್ದ. ಆಮೇಲೆ ಮುಂದುವರೆಸಿದವರು ಚಾವೋ ಬೆನ್ ಮತ್ತು ಚಾವೋ ಪೈಯನ್ ಅವರಾದ ಮೇಲೆ ಆಹ್‌ಕ್ಯೂ. ಬೇಸಿಗೆ ಕಾಲವಾಗಿದ್ದರೆ ಹೀಗೆ ಜುಟ್ಟನ್ನು ತಲೆ ಮೇಲೆ ಸುರುಳಿ ಸುತ್ತಿಕೊಳ್ಳುವುದೋ, ಇಲ್ಲವೆ ಗಂಟು ಹಾಕಿಕೊಳ್ಳುವುದೋ ಮಾಡಿದರೆ, ಯಾರಿಗೂ ವಿಚಿತ್ರವಾಗಿ ಅನ್ನಿಸುತ್ತಿರಲಿಲ್ಲ. ಆದರೆ ಇದು ಶರದೃತು ಮುಗಿಯಲು ಬಂದಿದ್ದ ಸಮಯವಾಗಿತ್ತು. ಬೇಸಿಗೆಯ ಈ ಪದ್ಧತಿಯನ್ನು ಶರದೃತುವಿನಲ್ಲಿ

ಅನುಸರಿಸಿದ್ದು ಒಂದು ಸಾಹಸಕ್ಕಿಂತ ಕಡಿಮೆಯೇನೂ ಆಗಿರಲಿಲ್ಲ. ವೀಷುವಾಂಗ್ ವಿಷಯಕ್ಕೆ ಬಂದಾಗ, ಸುಧಾರಣೆಯ ಜೊತೆ ವೀಷುವಾಂಗ್‌ನ ಸಂಬಂಧ ಇಲ್ಲ ಅಂತ ಹೇಳೋಕಾಗೊಲ್ಲ.

ಕತ್ತಿನ ಹಿಂಭಾಗದಲ್ಲಿ ಕೂದಲಿಲ್ಲದೆ ಬಂದ ಚಾವೊ ಷೂ ಚೆನ್‌ನನ್ನು ನೋಡಿ ಜನರು - "ಆಹ! ನೋಡಿ ಕ್ರಾಂತಿಕಾರಿ ಬಂದ!" ಎಂದು ಉದ್ಧರಿಸಿದರು.

ಇದನ್ನು ಕೇಳಿದ ಆಹ್‌ಕ್ಯೂ ತುಂಬಾ ಪ್ರಭಾವಿತನಾದ. ವಿಜೇತ ಕೌಂಟಿ ಅಭ್ಯರ್ಥಿ ಹೀಗೆ ತನ್ನ ಜುಟ್ಟನ್ನು ಸುರುಳಿ ಸುತ್ತಿ ತಲೆಮೇಲೆ ಇರಿಸಿಕೊಂಡಿದ್ದಾನೆ ಎಂಬುದನ್ನೇನೋ ಕೇಳಿದ್ದ. ಆದರೆ ಅದರಹಾಗೆ ಮಾಡಬೇಕೂಂತ ಅವನಿಗೆ ಎಂದೂ ಅನಿಸಿರಲಿಲ್ಲ. ಯಾವಾಗ ಚಾವೋ ಷೂ ಚೆನ್ ಕೂಡಾ ಕೌಂಟಿ ಅಭ್ಯರ್ಥಿ ತರಹ ಮಾಡಿದ್ದನ್ನು ನೋಡಿ ತಾನೂ ಹಾಗೇಕೆ ಮಾಡಬಾರದು ಎಂದು ಯೋಚಿಸಿದ. ಅವನನ್ನೇ ಅನುಕರಿಸಲು ಮನಸ್ಸು ಮಾಡಿದ. ಬಿದಿರಿನ ಕಡ್ಡಿಗಳನ್ನು ಬಳಸಿ ತನ್ನ ಜುಟ್ಟನ್ನು ಸುರುಳಿ ಮಾಡಿ ತಲೆಮೇಲೆ ಇರಿಸಿಕೊಂಡ. ಮೊದಲು ಸಂಕೋಚವಾದರೂ ಆಮೇಲೆ ಹೊರಗೆ ಹೊರಟ.

ರಸ್ತೇಲಿ ನಡೆಯುತ್ತಿರುವಾಗ ಜನ ಅವನನ್ನು ಗಮನಿಸಿದರು. ಆದರೆ ಏನೂ ಹೇಳಲಿಲ್ಲ. ಆಹ್‌ಕ್ಯೂಗೆ ಸಂತೋಷವಾಗಲಿಲ್ಲ. ಆಮೇಲೆ ಅವನಿಗೆ ಕೋಪ ಬಂತು. ಇತ್ತೀಚೆಗೆ ಅವನು ಬಹಳ ಬೇಗ ಉದ್ವಿಗ್ನನಾಗುತ್ತಿದ್ದ. ಹಾಗೆ ನೋಡಿದರೆ ಅವನ ಬದುಕು ಕ್ರಾಂತಿಗೆ ಮೊದಲು ಹೇಗಿತ್ತೋ ಹಾಗೇ ಇತ್ತು. ಅದಕ್ಕಿಂತ ಕಷ್ಟ ಏನೂ ಆಗಿರಲಿಲ್ಲ. ಜನರೂ ಅವನನ್ನು ಮೃದುವಾಗೇ ಮಾತಾಡಿಸಿದರು. ಅಂಗಡಿಯವರು ನಗದು ರೂಪದಲ್ಲಿ ಕೊಡೂಂತ ಕೂಡ ಕೇಳುತ್ತಿರಲಿಲ್ಲ. ಆದರೂ ಆಹ್‌ಕ್ಯೂಗೆ ಏನೋ ಅಸಮಾಧಾನ, ಅಸಂತೃಪ್ತಿ. ಕ್ರಾಂತಿ ಆಗಿದೆ ಅಂದಮೇಲೆ ಇನ್ನಷ್ಟು ಬದಲಾವಣೆ ಆಗಬೇಕಿತ್ತು. ಯಂಗ್ ಡಿಯನ್ನು ನೋಡಿದಾಗ ಅವನ ಕೋಪ ಕುದಿಯತೊಡಗಿತು.

ಯಂಗ್‌ಡಿ ಕೂಡ ಜುಟ್ಟನ್ನು ಸುರುಳಿ ಸುತ್ತೋಕೆ ಬಿದಿರಿನ ಚಾಪ್‌ಸ್ಟಿಕ್‌ಗಳನ್ನೇ ಬಳಸಿದ್ದ. ತಾನು ಮಾಡಿದ ಹಾಗೆ ಮಾಡೋ ಧೈರ್ಯ ಅವನಿಗೆ ಇರುತ್ತೆ ಅಂತ ಆಹ್‌ಕ್ಯೂ ಊಹಿಸಿರಲಿಲ್ಲ. ಯಂಗ್‌ಡಿ ಎಷ್ಟರವನು? ಈಗ ಅವನು ಸಾಕಷ್ಟು ಮೆದುವಾಗಿ ಬಿಟ್ಟಿದ್ದ. ಇಲ್ಲವಾದಲ್ಲಿ ಕೈಹಾಕಿ ಚಾಪ್‌ಸ್ಟಿಕ್‌ಗಳನ್ನು ಕಿತ್ತು, ಕೂದಲು ಮತ್ತೆ ಕತ್ತಿನ ಮೇಲೆ ಬಂದು ಬೀಳುವಂತೆ ಮಾಡುತ್ತಿದ್ದ. ಆದರೆ ಈ ಸಲ ಹಾಗೆ ಮಾಡದೆ

ಅವನನ್ನು ಹೋಗಲು ಬಿಟ್ಟ, "'ಪೂಹ್" ಎಂದು ಉದ್ಧರಿಸಿ, ಸುಮ್ಮನೆ ಅವನತ್ತ ದೃಷ್ಟಿ ಬೀರಿದ.

ಇತ್ತೀಚೆಗೆ ಪಟ್ಟಣಕ್ಕೆ ಹೋದವನೆಂದರೆ ವಿದೇಶಿ ಅನುಕರಣೆ ಪಿಶಾಚಿ (Imitation foreign devil) ವಿಜೇತ ಕೌಂಟಿ ಅಭ್ಯರ್ಥಿ, ತನ್ನ ಮನೇಲಿ ಇರಿಸಿಕೊಂಡಿದ್ದ ಪೆಟ್ಟಿಗೆಗಳ ನೆವದಲ್ಲಿ ವಿಜೇತ ಪ್ರಾವೆನ್‌ಷಿಯಲ್ ಅಭ್ಯರ್ಥಿಯನ್ನು ಹೋಗಿ ಮಾತಾಡಿಸಬೇಕು ಅಂತ ಅಂದುಕೊಂಡ. ಆದರೆ ಅವನು ತನ್ನ ಜುಟ್ಟನ್ನು ಪೂರ್ತಿಯಾಗಿ ಕತ್ತರಿಸಿ ಬಿಟ್ಟಿರುವ ಸಾಧ್ಯತೆಯ ಅಪಾಯ ನೆನೆದು, ಅವನಲ್ಲಿಗೆ ಹೋಗುವುದನ್ನು ಸದ್ಯಕ್ಕೆ ನಿಲ್ಲಿಸಿದ. ಔಪಚಾರಿಕವಾದ ಪತ್ರವೊಂದನ್ನು ಬರೆದು ವಿದೇಶಿ ಅನುಕರಣೆ ಪಿಶಾಚಿ ಕೈಯಲ್ಲಿ ಪಟ್ಟಣಕ್ಕೆ ತೆಗೆದುಕೊಂಡು ಹೋಗಲು ಕೊಟ್ಟ. ಅಲ್ಲಿ ತನ್ನನ್ನು ಲಿಬರ್ಟಿ ಪಾರ್ಟಿ ಜೊತೆ ಪರಿಚಯಿಸಿಕೊಳ್ಳ ಹೇಳಿದ. ಅವನು ವಾಪಸ್ ಬಂದಾಗ, ಕೌಂಟಿ ಅಭ್ಯರ್ಥಿಯನ್ನು ನಾಲ್ಕು ಡಾಲರ್ ನೀಡಲು ಕೇಳಿದ. ಅದಾದ ನಂತರ ಇವನು ತನ್ನೆದೆ ಮೇಲೆ ಬೆಳ್ಳಿಯ ಬ್ಯಾಡ್ಜೊಂದನ್ನು ತಗುಲಿಸಿಕೊಂಡ. ಜನರಿಗೆ ಒಂದು ಥರಾ ಚಿಂತೆಯಾಯಿತು. ಅವರಿಗೆ "ಪೆರ್ಸಿಮ್ಮೋನ್ ಆಯಿಲ್ ಪಾರ್ಟಿ" ಅನ್ನೋದು ಗೊತ್ತಾಗಿ ಹೋಯಿತು. ಇದರಿಂದಾಗಿ ಚಾವೋನ ಗೌರವ ಇನ್ನಷ್ಟು ಹೆಚ್ಚಾಯಿತು. ಮೊಟ್ಟ ಮೊದಲ ಸಲ ಅವನ ಮಗ ಸರಕಾರಿ ಪರೀಕ್ಷೆ ಪಾಸು ಮಾಡಿ ಬಂದಾಗ ತೋರಿದ ಗೌರವಕ್ಕಿಂತ ಹೆಚ್ಚಿನದಾಗಿತ್ತು. ಪರಿಣಾಮವಾಗಿ ಎಲ್ಲರನ್ನೂ ಕೀಳಾಗಿ ಕಾಣತೊಡಗಿದ. ಆಹ್‌ಕ್ಯೂ ಅಂತೂ ಅವನ ದೃಷ್ಟೀಲಿ ಲೆಕ್ಕಕ್ಕೇ ಇರಲಿಲ್ಲ.

ಒಂದೇ ಸಮನೆ ತನ್ನನ್ನು ಹೀಗೆ ನಿರ್ಲಕ್ಷಿಸುತ್ತ ಇರುವುದನ್ನು ನೋಡಿ ಬೇಸರ ಪಟ್ಟ. ಬೆಳ್ಳಿ ಬ್ಯಾಡ್ಜನ ವಿಷಯ ತಿಳಿದಾಗ, ತನ್ನನ್ನು ಹೀಗೆ ತಾತ್ಸಾರ ಮಾಡುತ್ತಿರುವುದು ಯಾಕೇಂತ ಅರ್ಥವಾಯಿತು. ಸುಮ್ಮನೆ ಹೀಗೆ ಹೋಗಿ ಬರುವುದರಿಂದ ಜುಟ್ಟನ್ನು ಮೇಲಕ್ಕೆತ್ತಿ ಕಟ್ಟುವುದರಿಂದ ಯಾರೂ ಕ್ರಾಂತಿಕಾರ ಆಗೊಲ್ಲ. ನಿಜವಾಗಿಯೂ ಕ್ರಾಂತಿ ಪಾರ್ಟಿ ಜೊತೆ ಸಂಬಂಧ ಇಟ್ಟುಕೊಂಡರೇನೇ ಕ್ರಾಂತಿಕಾರ ಅಂತ ಕರೆಸಿಕೊಳ್ಳೋದು. ಅವನ ಜೀವಮಾನದಲ್ಲಿ ಅವನಿಗೆ ಗೊತ್ತಿದ್ದದ್ದು ಇಬ್ಬರೇ ಇಬ್ಬರು ಕ್ರಾಂತಿವಾದಿಗಳು. ಅದರಲ್ಲಿ ಒಬ್ಬ ಪಟ್ಟಣದಲ್ಲಿ ಎಲ್ಲೋ ತಲೆ ತಪ್ಪಿಸಿಕೊಂಡಿದ್ದ. ಉಳಿದ ಮತ್ತೊಬ್ಬ ವಿದೇಶಿ ಅನುಕರಣೆ ಪಿಶಾಚಿ. ತಕ್ಷಣ ಹೋಗಿ ಅವನನ್ನು ಮಾತಾಡಿಸಿ ಬರಬೇಕು. ಇಲ್ಲವಾದರೆ ಅವನಿಂದ ಏನೂ ಗೊತ್ತಾಗುವುದೇ ಇಲ್ಲ.

ಚಿಯೆನ್ ಮನೆಯ ಮುಂಬಾಗಿಲು ತೆರೆದೇ ಇತ್ತು. ಆಹ್‌ಕ್ಯೂ ಹೆದರುತ್ತಲೇ ಒಳಗೆ ನುಸುಳಿದ. ಒಳಗೆ ಹೋದದ್ದೇ ಅಪ್ರತಿಭನಾದ. ಅವನಿಗೆ ಎದುರಾಗಿಯೇ ವಿದೇಶಿ ಅನುಕರಣೆ ಪಿಶಾಚಿ ಅಂಗಳದ ಮಧ್ಯದಲ್ಲಿ ನಿಂತಿದ್ದ. ಪೂರ್ತಿ ಕಪ್ಪು ಬಣ್ಣದ ವಿದೇಶಿ ಉಡುಪಿನಲ್ಲಿದ್ದ. ಜೊತೆಗೆ ಬೆಳ್ಳಿಯ ಬಿಲ್ಲೆಯೊಂದನ್ನು (ಪೀಚ್ ಆಕಾರದ) ಧರಿಸಿದ್ದ. ಅವನ ಕೈಯಲ್ಲಿ ಆಹ್‌ಕ್ಯೂ ರುಚಿ ಕಂಡಿದ್ದ, ಪರಿಚಿತವಾದ ಕೋಲು ಒಂದನ್ನು ಹಿಡಿದಿದ್ದ. ಸ್ವಲ್ಪ ಬೆಳೆದಿದ್ದ ಕೂದಲು ಅವನ ಭುಜಗಳನ್ನು ಸ್ಪರ್ಶಿಸುತ್ತಿದ್ದವು. ಸಂತ ಲಿಯುನ ಕೂದಲಿನ ಹಾಗೆ ಅಸ್ತವ್ಯಸ್ತವಾಗಿತ್ತು. ಅವನ ಮುಂದೆ ಚಾವೋ ಪೈಯೆನ್ ಮತ್ತು ಇನ್ನೂ ಮೂವರು ನೆಟ್ಟಗೆ ನಿಂತಿದ್ದರು. ಅವರೆಲ್ಲರೂ ವಿದೇಶಿ ಅನುಕರಣೆ ಪಿಶಾಚಿ ಹೇಳುತ್ತಿದ್ದುದ್ದನ್ನು ತುಂಬ ಗಂಭೀರವಾಗಿ ಕೇಳಿಸಿಕೊಳ್ಳುತ್ತಿದ್ದರು.

ಆಹ್‌ಕ್ಯೂ ಕಳ್ಳ ಹೆಜ್ಜೆಗಳಲ್ಲಿ ಒಳಗೆ ಹೋಗಿ ಚಾವೋ ಪೈಯೆನ್‌ನ ಹಿಂದೆ ಹೋಗಿ ನಿಂತುಕೊಂಡು ಅವನಿಗೆ ಅಭಿನಂದಿಸಬೇಕೆಂದುಕೊಂಡ. ಆದರೆ ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ವಿದೇಶಿ ಅನುಕರಣೆ ಪಿಶಾಚಿ ಎಂತಲೋ ವಿದೇಶಿ ಎಂತಲೋ ಕ್ರಾಂತಿಕಾರ ಎಂತಲೋ ಕರೆಯಬೇಕೆಂದುಕೊಂಡ. ಆದರೆ ಯಾವುದೂ ಅವನಿಗೆ ಸೂಕ್ತವೆನಿಸಲಿಲ್ಲ. ಇದ್ದುದರಲ್ಲಿ ಮಿಸ್ಟರ್ ವಿದೇಶಿ ಅನ್ನೋದೇ ಸರಿಯಾಗಿರುತ್ತೆ ಎಂದು ಭಾವಿಸಿದ.

ಆದರೆ ಮಿಸ್ಟರ್ ವಿದೇಶಿ ಅವನನ್ನು ಗಮನಿಸಿರಲಿಲ್ಲ. ಅವನು ಬಹಳ ಭಾವುಕನಾಗಿ ಕಣ್ಣಿನ ಮೂಲಕ ಅಭಿನಯಿಸಿ ಏನನ್ನೋ ಹೇಳುತ್ತಿದ್ದ.

"ನಾನು ಅಲ್ಲಿ ಎಷ್ಟು ಮುಖ್ಯನಾಗಿದ್ದೆ ಅಂದರೆ", ನಾನು ಹೇಳುತ್ತಾ ಹೋದೆ - "ಹಿರಿಯ ಹೂಂಗ್, ಅದರ ಜೊತೆ ಹೇಗೋ ಹೊಂದಿಕೊಳ್ಳಲೇ ಬೇಕು. ಆದರೆ ಅವನು ಯಾವಾಗಲೂ ಇಲ್ಲ ಎಂದೇ ಹೇಳುತ್ತಿದ್ದ. ಅದೊಂದು ವಿದೇಶಿ ಶಬ್ಧ. ನಿಮಗೆ ಅರ್ಥವಾಗೋದಿಲ್ಲ ಬಿಡಿ. ಹಾಗಿಲ್ಲದಿದ್ದರೆ ನಮಗೆ ಯಾವಾಗಲೋ ಜಯ ಸಿಕ್ಕಿರೋದು. ಅವನು ಎಷ್ಟು ಜಾಗರೂಕನಾಗಿರುತ್ತಾನೆ ಅನ್ನೋದಕ್ಕೆ ಇದೊಂದು ನಿದರ್ಶನ. ಹುಪೆಹ್‌ಗೆ ಹೋಗೋಣಾಂತ ಪದೇ ಪದೇ ನನ್ನನ್ನು ಕೇಳಿದ. ನಾನು ಒಪ್ಪಲಿಲ್ಲ. ಆ ಸಣ್ಣ ಜಾಗದಲ್ಲಿ ಕೆಲಸಮಾಡೋದು ಯಾರಿಗೆ ಬೇಕಾಗಿದೆ?"

ಆಹ್‌ಕ್ಯೂ ಅವನು ಸುಮ್ಮನಾಗಲು ಕಾದ. ನಂತರ ಧೈರ್ಯವನ್ನೆಲ್ಲ ತಂದುಕೊಂಡು ಮಾತಾಡಬೇಕೆಂದುಕೊಂಡ. ಅದೇನು ಕಾರಣವೋ ಇಷ್ಟೆಲ್ಲ ಆದರೂ ಮಿಸ್ಟರ್ ವಿದೇಶಿ ಅಂತ ಕರೆಯಲೇ ಇಲ್ಲ.

ಕೇಳುತ್ತಿದ್ದ ನಾಲ್ಕು ಜನ ಬೆಚ್ಚಿಬಿದ್ದು, ಆಹ್‌ಕ್ಯೂನನ್ನು ದಿಟ್ಟಿಸಿದರು. ಮಿಸ್ಟರ್ ವಿದೇಶಿ ಕೂಡಾ ಮೊದಲ ಬಾರಿಗೆ ಅವನನ್ನು ಗಮನಿಸಿದ.

"ಏನು?"

"ನಾನು....."

"ಸ್ಪಷ್ಟವಾಗಿ ಹೇಳು..."

"ನನಗೂ ಸೇರಬೇಕಂತ ಇದೆ..."

"ನಡೆಯೋ ಆಚೆ" ಮಿಸ್ಟರ್ ವಿದೇಶಿ ಬೆತ್ತ ತಗೊಂಡು ಹೊಡೆಯಲು ಪ್ರಯತ್ನಿಸುತ್ತಾ ಹೇಳಿದ.

ನಂತರ ಚಾವೋ ಪೈ ಯೆನ್ ಮತ್ತು ಇತರರು, "ಮಿಸ್ಟರ್ ಚಿಯೆನ್ ನಿನ್ನನ್ನು ಹೋಗೂಂತ ಹೇಳ್ತಿದ್ದಾನೆ. ಕೇಳಿಸುವುದಿಲ್ಲವೇನು ನಿನಗೆ?"

ಕೈಗಳನ್ನು ಮೇಲೆತ್ತಿ ತಲೆಯನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತ, ತಾನು ಏನು ಮಾಡುತ್ತಿದ್ದೀನಿ ಎನ್ನುವ ಪ್ರಜ್ಞೆಯೂ ಇಲ್ಲದೆ, ಗೇಟಿನಿಂದ ಹೊರಗೆ ಹೊರಟ. ಈ ಬಾರಿ ಮಿಸ್ಟರ್ ವಿದೇಶಿ ಅವನನ್ನು ಅಟ್ಟಿಸಿಕೊಂಡು ಹೋಗಲಿಲ್ಲ. ಒಂದು ಅರವತ್ತು ಹೆಜ್ಜೆಯಷ್ಟು ಓಡಿದ ಮೇಲೆ ನಿಧಾನಿಸಿದ. ಅವನಿಗೆ ಬಹಳ ಕೆಡುಕೆನಿಸಿತು. ಮಿಸ್ಟರ್ ವಿದೇಶಿ ತನ್ನನ್ನು ಕ್ರಾಂತಿ ಒಳಗೆ ಸೇರಿಸಿಕೊಳ್ಳಲಿಲ್ಲ ಅಂದರೆ, ಅವನಿಗೆ ಬೇರೆ ದಾರೀನೇ ಇರಲಿಲ್ಲ. ಇನ್ನು ಮುಂದೆ ಎಂದೂ ಬಿಳಿ ಹೆಲ್ಮೆಟ್ ಕವಚಗಳಲ್ಲಿ ಜನರು ತನ್ನೊಡನೆ ಕಾಣಿಸುವುದೇ ಇಲ್ಲ. ಯಾರೂ ಬಂದು ಕರೆಯೋದೂ ಇಲ್ಲ. ಅವನ ಆಸೆ, ಆಕಾಂಕ್ಷೆ, ಭರವಸೆ, ನಿರೀಕ್ಷೆ ಎಲ್ಲವೂ ಒಂದೇ ಸಲಕ್ಕೆ ಮುಗಿದು ಹೋಯಿತು. ಜನ ಈ ಸುದ್ದಿ ಹರಡಿ ಯಂಗ್‌ಡಿ ವಿಸ್ಕರ್ಸ್‌ವ್ಯಾಂಗ್ ಅಂಥವರ ಎದುರು ನಗುವ ಹಾಗೆ ಮಾಡಿದರೆ ಅದೇನು ದೊಡ್ಡ ವಿಷಯವಲ್ಲ.

ಇವತ್ತು ಆದಂತೆ ಎಂದೂ ಹಿಂದೆ ಇಂಥ ನಿರಾಶೆ ಆಗಿರಲಿಲ್ಲ. ತನ್ನ ಜುಟ್ಟಿನ ಬಗ್ಗೆ ಜನ ಈಗ ಏನೇ ಅಂದರೂ, ಅವನಿಗೆ ಈಗ ಬೇಸರವಾಗುತ್ತಿರಲಿಲ್ಲ. ಸೇಡು ತೀರಿಸಿಕೊಳ್ಳುವ ಸಂಕೇತವಾಗಿ ಆ ಕೂಡಲೇ ಜುಟ್ಟನ್ನು ಬಿಚ್ಚಿ ಕೆಳಗೆ ಹರಡಲು, ಈಗ ಅವನು ಸಾಧುವಾಗಿ ಬಿಟ್ಟಿದ್ದ. ಸಂಜೆ ತನಕ ಅಡ್ಡಾಡಿದ. ಹೋಗಿ ಒಂದೆರಡು ಬಟ್ಟಲು ಹೆಂಡವನ್ನು ಸಾಲದ ಮೇಲೆ ಕುಡಿದು ಬಂದಾಗ ಸ್ವಲ್ಪ ಹಾಯೆನಿಸಿತು. ಆದರೆ ಅವನ

ತಲೆ ತುಂಬ ಬರೀ ಹೆಲ್ಮೆಟ್‌ಗಳು, ಕವಚಗಳು ಮತ್ತೊಮ್ಮೆ ಕಾಣಿಸಿಕೊಂಡವು.

ಒಂದು ದಿನ ರಾತ್ರಿ ತುಂಬಾ ಹೊತ್ತು ಸುತ್ತಾಡಿದ. ಹೆಂಡದಂಗಡಿ ಮುಚ್ಚುವಾಗಷ್ಟೇ ತನ್ನ ಗುಡಿಗೆ ಮರಳಿದ.

"ಧಡ್!.."

ಇದ್ದಕ್ಕಿದ್ದಂತೆ, ಎಂದೂ ಕೇಳಿರದ ದೊಡ್ಡ ಸದ್ದಾಯಿತು. ಅದು ಪಟಾಕಿ ಸದ್ದಾಗಿರಲಿಲ್ಲ. ಆಹ್‌ಕ್ಯೂಗೆ ಮಾಮೂಲಾಗಿ ಈ ಥರದ ಎಕ್ಸೈಟ್‌ಮೆಂಟ್ ಅಂದರೆ ಬಹಳ ಇಷ್ಟ. ಯಾವಾಗಲೂ ಇನ್ನೊಬ್ಬರ ವಿಷಯದಲ್ಲಿ ಮೂಗು ತೂರಿಸುವುದು ಅಂದರೆ ಬಹಳ ಖುಷಿ. ಈಗ ಸದ್ದು ಏನು, ಎಲ್ಲಿಂದ ಅಂತ ತಿಳಿಯಲು ಕತ್ತಲಲ್ಲಿ ಹೊರಟ. ಅವನಿಗೆ ಯಾರದೋ ಹೆಜ್ಜೆ ಸಪ್ಪಳ ಕೇಳಿಸಿತು. ಗಮನವಿಟ್ಟು ಕೇಳ ತೊಡಗಿದಾಗ ಥಟ್ಟನೆ ಒಬ್ಬ ಮನುಷ್ಯ ಅವನಿಗೆ ಎದುರಾಗಿ ಬಂದು ನಿಂತ. ಅವನನ್ನು ನೋಡಿದ ಕೂಡಲೆ ತಿರುಗಿ ಅವನನ್ನೇ ಆದಷ್ಟು ವೇಗವಾಗಿ ಅನುಸರಿಸಿದ. ಆ ಮನುಷ್ಯ ಹಿಂತಿರುಗದಾಗ, ಆಹ್‌ಕ್ಯೂ ಕೂಡಾ ತಿರುಗಿದ. ಆ ಮೂಲೆಯಲ್ಲಿ ತಿರುಗಿ ಆ ಮನುಷ್ಯ ನಿಂತ. ಆಹ್‌ಕ್ಯೂ ಕೂಡ ನಿಂತ. ನೋಡಿದ. ಹಿಂದೆ ಯಾರೂ ಇರಲಿಲ್ಲ. ಆ ಮನುಷ್ಯ ಬೇರೆಯಾರೂ ಅಲ್ಲ. ಯಂಗ್‌ಡಿ ಆಗಿದ್ದ.

"ಏನು ಸಮಾಚಾರ?" - ಆಹ್‌ಕ್ಯೂ ಸಿಡುಕಿನಿಂದ ಪ್ರಶ್ನಿಸಿದ.

"ಚಾವೋ... ಚಾವೋ ಮನೆಯಲ್ಲಿ ಕಳ್ಳತನವಾಗಿದೆ" ಏದುಸಿರಿನೊಂದಿಗೆ ಯಂಗ್‌ಡಿ ಹೇ ೨ದ.

ಆಹ್‌ಕ್ಯೂನ ಎದೆ ಬಡಿದುಕೊಳ್ಳತೊಡಗಿತು. ಇದನ್ನು ಹೇಳಿ ಯಂಗ್‌ಡಿ ಅಲ್ಲಿಂದ ಹೊರಟು ಹೋದ. ಆಹ್‌ಕ್ಯೂ ಓಡತೊಡಗಿದ. ಒಂದೆರಡು ಬಾರಿ ನಿಂತುಕೊಂಡ. ಅವನು ಈಗಾಗಲೇ ಕಳ್ಳತನದಲ್ಲಿ ಇದ್ದವನಾಗಿದ್ದರಿಂದ ಸ್ವಲ್ಪ ಧೈರ್ಯವಾಗಿ ಇದ್ದ. ಬೀದಿ ಕೊನೆಯಿಂದ ಹೊರಟು ಗಮನವಿಟ್ಟು ಕೇಳಿದ. ಯಾರೋ ಕೂಗುತ್ತಿದ್ದರು. ಗಮನವಿಟ್ಟು ನೋಡಿದ. ತುಂಬಾ ಜನ ಬಿಳಿ ಹೆಲ್ಮೆಟ್‌ಗಳಲ್ಲಿ, ಕವಚಗಳಲ್ಲಿ ಇದ್ದು ದೊಡ್ಡ ದೊಡ್ಡ ಪೆಟ್ಟಿಗೆ, ಫರ್ನಿಚರ್, ಕೌಂಟಿ ಕ್ಯಾಂಡಿಡೇಟ್‌ನ ಹೆಂತಡಿಯ ನಿಂಗ್ಪೋ ಹಾಸಿಗೆ ಎಲ್ಲವನ್ನೂ ಹೊತ್ತುಕೊಂಡು ಹೋಗುವುದನ್ನು ನೋಡುತ್ತೇನೆಂದು ಯೋಚಿಸಿದ. ಆದರೆ ಯಾರೂ ಸ್ಪಷ್ಟವಾಗಿ ಕಾಣಿಸಲಿಲ್ಲ. ಹತ್ತಿರ ಹೋಗಿ ನೋಡಬೇಕೆನಿಸಿತು. ಆದರೆ ಅಲ್ಲಿಂದ ಕದಲುವುದು ಸಾಧ್ಯವಾಗಲಿಲ್ಲ.

ಆ ದಿನ ರಾತ್ರಿ ಚಂದ್ರ ಇರಲಿಲ್ಲ. ದಟ್ಟ ಕತ್ತಲಲ್ಲಿ ವೀಷುವಾಂಗ್ ಮೌನವಾಗಿತ್ತು. ಹಿಂದಿನ ಚಕ್ರವರ್ತಿ ಪೂಸಿಯ ಕಾಲದಲ್ಲಿ ಶಾಂತವಾಗಿದ್ದಂತೆ ಇತ್ತು. ಆಸಕ್ತಿ ಕಳೆದುಕೊಳ್ಳುವವರೆಗೂ ನಿಂತಿದ್ದ. ಎಲ್ಲವೂ ಎಂದಿನಂತೆ ಸ್ತಬ್ಧವಾಗಿತ್ತು. ದೂರದಲ್ಲಿ ಜನ ಆ ಕಡೆ ಈ ಕಡೆ ಓಡಾಡುತ್ತ ಇದ್ದರು. ಪೆಟ್ಟಿಗೆಗಳನ್ನು ಕುರ್ಚಿ ಮೇಜುಗಳನ್ನು ನಿಂಗ್ವೋ ಹಾಸಿಗೆಯನ್ನು ಹೊತ್ತು ಹೋಗುತ್ತಿದ್ದರು. ನಂಬುವುದಕ್ಕೇ ಸಾಧ್ಯವಿಲ್ಲದ ಹಾಗೆ ಹೊತ್ತು ಹೋದರು. ಹತ್ತಿರಕ್ಕೆ ಹೋಗಬಾರದೆಂದು ತೀರ್ಮಾನಿಸಿದ್ದ. ನಂತರ ಗುಡಿಯ ಕಡೆಗೆ ನಡೆದ. ಅವನ ರಕ್ಷಕದೇವರ ಗುಡಿಯಲ್ಲಿ ಇನ್ನೂ ದಟ್ಟವಾದ ಕತ್ತಲಿತ್ತು. ದೊಡ್ಡ ಬಾಗಿಲು ಮುಚ್ಚಿದ ಮೇಲೆ ತನ್ನ ಕೋಣೆಯ ಕಡೆಗೆ ನಡೆದ. ಸ್ವಲ್ಪ ಹೊತ್ತು ಮೈಚಾಚಿ ಮಲಗಿದ ಮೇಲೆ ಮನಸ್ಸಿಗೆ ಹಾಯೆನಿಸಿತು. ಆಗ ಇದೆಲ್ಲ ತನ್ನ ಮೇಲೆ ಹೇಗೆ ಪರಿಣಾಮ ಬೀರಿತು ಎಂದು ಯೋಚಿಸಲು ಸಾಧ್ಯವಾಯಿತು. ಬಿಳಿ ಹೆಲ್ಮೆಟ್, ಬಿಳಿ ಕವಚದ ಮಂದಿ ಬಂದಿದ್ದು ನಿಜವೇ ಆದರೂ ತನ್ನನ್ನು ಮಾತ್ರ ಕರೆದಿರಲಿಲ್ಲ. ಬೇಕದಷ್ಟು ಸಾಮಾನೆಲ್ಲ ಹೊತ್ತು ಹೋಗಿದ್ದರು. ಆದರೆ ಅದರಲ್ಲಿ ತನ್ನ ಪಾಲಿಲ್ಲ. ವಿದೇಶಿ ಪಿಶಾಚಿ ಮಾಡಿದ್ದು ಇದೇ ತಪ್ಪು. ತನ್ನನ್ನು ಕ್ರಾಂತಿಯಿಂದ ಹೊರಗೆ ಹಾಕಿದ್ದ. ಇಲ್ಲದಿದ್ದರೆ ತನಗೆ ಪಾಲು ಇರುತ್ತಿರಲಿಲ್ಲವೇ?

ಯೋಚಿಸಿದಷ್ಟೂ ಆಹ್‌ಕ್ಯೂಗೆ ಸಿಟ್ಟೇರುತ್ತಿತ್ತು. ಭುಗಿಲೇಳುವ ಮಟ್ಟಿಗೆ ಸಿಟ್ಟು ಹೆಚ್ಚಾಯಿತು. "ಹೂಂ! ನನಗೆ ಕ್ರಾಂತಿ ಇಲ್ಲ. ಎಲ್ಲ ನಿನಗೇ! ಹೌದಲ್ಲ" ವಿಕಟನಾಗಿ ಉದ್ಗರಿಸಿ ಹೇಳಿಕೊಂಡ. "ಹಾಳಾಗಿ ಹೋಗು ಪಿಶಾಚಿ!.... ಇರಲಿ.. ಇರಲಿ... ನೀನೇ ದಂಗೆಕೋರ! ದಂಗೆ ಕೋರರ ತಲೆ ಕತ್ತರಿಸಿ ಶಿಕ್ಷೆ ಕೊಡುತ್ತಾರೆ. ನಾನೇ ಹೋಗಿ ಸುದ್ದಿ ತಿಳಿಸ್ತೀನಿ. ಬಂದು ನಿನ್ನನ್ನು ಪಟ್ಟಣಕ್ಕೆ ಎಳೆದುಕೊಂಡು ಹೋಗುತ್ತಾರೆ. ನಿನ್ನ ತಲೆ ಕತ್ತರಿಸುತ್ತಾರೆ. ನೀನು ಮತ್ತು ನಿನ್ನ ಕುಟುಂಬವೆಲ್ಲಾ... ಕೊಲ್ಲಿರಿ! ಕೊಲ್ಲಿರಿ!"

## ಅಧ್ಯಾಯ - ೯

## ಮಹಾಮುಕ್ತಾಯ

ಚಾವೋ ಮನೆಯಲ್ಲಿ ಕಳ್ಳತನ ಆದದ್ದು, ಎಲ್ಲರಿಗೂ ಸಂತೋಷವಾಗಿದ್ದರೂ, ಏನೋ ಒಂದು ಥರ ಭಯ ಇತ್ತು. ಆಹ್‌ಕ್ಯೂ ಕೂಡ ಇದಕ್ಕೆ ಹೊರತಾಗಿರಲಿಲ್ಲ. ನಾಲ್ಕು ದಿವಸ ಅದ ಮೇಲೆ ಒಂದು ದಿನ ಮಧ್ಯರಾತ್ರಿ ಆಹ್‌ಕ್ಯೂನನ್ನು ಇದ್ದಕ್ಕಿದ್ದಂತೆ ಪಟ್ಟಣದ ಕಡೆ ಎಳೆದುಕೊಂಡು ಹೋದರು. ಸೈನಿಕರ ಒಂದು ತುಕಡಿ, ಮಿಲಿಟರಿ ತುಕಡಿ, ಒಂದಷ್ಟುಜನ ಪೋಲೀಸರು, ಗುಪ್ತದಳ ಸೈನಿಕರು ಮೆಲ್ಲಗೆ ಯಾರಿಗೂ ತಿಳಿಯದಂತೆ ವೀಷುವಾಂಗನ ಒಳಗೆ ಪ್ರವೇಶಿಸಿದರು. ನಂತರ ಮೆಶಿನ್‌ಗನ್ ಒಂದನ್ನು ಪ್ರವೇಶ ದ್ವಾರಕ್ಕೆ ಎದುರಾಗಿ ನಿಲ್ಲಿಸಿದ ಮೇಲೆ, ಕತ್ತಲಲ್ಲಿ ಆಹ್‌ಕ್ಯೂ ಇದ್ದ ರಕ್ಷಕ ದೇವರಗುಡಿಯನ್ನು ಮುತ್ತಿದರು. ಆಹ್‌ಕ್ಯೂ ಹೆದರಿ ಹೊರಗಡೆ ಓಡಿ ಹೋಗಲಿಲ್ಲ. ಸುಮಾರು ಹೊತ್ತು ಗುಡಿಯಲ್ಲಿ ಏನೂ ಚಲನವಲನ ಕಾಣಿಸಲಿಲ್ಲ. ಕ್ಯಾಪ್ಟನ್‌ಗೆ ಅಸಮಾಧಾನವಾಗುತ್ತಿತ್ತು. ಇಪ್ಪತ್ತು ಸಾವಿರ ಬಹುಮಾನ ಘೋಷಿಸಿದ. ಆಗ ಮಾತ್ರ ಒಂದಿಬ್ಬರು ಮಿಲಿಟರಿ ವ್ಯಕ್ತಿಗಳು ಧೈರ್ಯ ತಂದುಕೊಂಡು ಗೋಡೆ ಹಾರಿ ಒಳನುಗ್ಗಿದರು. ಅವರೊಂದಿಗೆ ಒಳಗಿದ್ದವರ ನೆರವಿನೊಂದಿಗೆ ಆಹ್‌ಕ್ಯೂನನ್ನು ಹೊರಗೆ ಎಳೆದುಕೊಂಡು ಹೋದರು. ಅವನನ್ನು ಮೆಷಿನ್‌ಗನ್ ಇರುವ ಜಾಗಕ್ಕೆ ಕರೆದೊಯ್ಯುವ ತನಕ ಮೆತ್ತಗಾಗಲಿಲ್ಲ.

ಪಟ್ಟಣ ತಲುಪುವ ಹೊತ್ತಿಗಾಗಲೇ ಮಧ್ಯಾಹ್ನವಾಗಿತ್ತು. ಆಹ್‌ಕ್ಯೂಗೆ ತಾನೊಂದು ಪಾಳುಬಿದ್ದ ಕಟ್ಟಡದಲ್ಲಿ ಇರುವುದು ಗೊತ್ತಾಯಿತು. ಐದಾರು ಸುತ್ತುಗಳಾದ ಮೇಲೆ ಒಂದು ಕತ್ತಲೆಯ ಕೋಣೆಯೊಳಕ್ಕೆ ನೂಕಿದರು. ಅವನನ್ನು ಒಳಗೆ ಎಸೀತಿದ್ದಂತೆ, ಮರದ ಬಾಗಿಲು ಅವನ ಹಿಂದೆಯೇ ಮುಚ್ಚಿಕೊಂಡಿತು. ಕೋಣೆಯಲ್ಲಿ ಮೂರು ಖಾಲಿ ಗೋಡೆಗಳಿದ್ದವು. ಜಾಗರೂಕತೆಯಿಂದ ಕೋಣೆಯ ಸುತ್ತ ಕಣ್ಣಾಡಿಸಿದಾಗ ಮೂಲೆಯಲ್ಲಿ ಒಂದಿಬ್ಬರು ಕುಳಿತದ್ದು ಕಾಣಿಸಿತು.

ಆಹ್‌ಕ್ಯೂಗೆ ಒಂದು ಥರಾ ಮುಜುಗರ ಎನಿಸಿದರೂ ಅವನೇನೂ ದುಃಖಿತನಾಗಿರಲಿಲ್ಲ. ಕಾರಣ ತಾನು ಮಲಗುತ್ತಿದ್ದ ಗುಡಿಯ ಕೋಣೆ ಇದಕ್ಕಿಂತ ಉತ್ತಮವಾಗೇನೂ ಇರಲಿಲ್ಲ. ಆ ಇಬ್ಬರೂ ಕೂಡ ಊರಿನವರಾಗಿದ್ದರು. ಪರಸ್ಪರ ಮಾತಾಡಿಕೊಳ್ಳುತ್ತಿದ್ದರು. ಒಬ್ಬ ಇನ್ನೊಬ್ಬನಿಗೆ ಹೇಳಿದ. ತನ್ನ ತಾತ ಪ್ರಾವೆನ್‌ಷಿಯಲ್

ಅಭ್ಯರ್ಥಿಗೆ ಬಾಕಿ ಇದ್ದ ಬಾಡಿಗೆ ಹಣಕ್ಕಾಗಿ ತನ್ನನ್ನು ಈ ರೀತಿ ಸಿಕ್ಕಿಸಿದ್ದಾನೆ ಎಂದು. ಇನ್ನೊಬ್ಬ ತನ್ನನ್ನು ಯಾವ ಕಾರಣಕ್ಕಗಿ ಕರೆತಂದಿದ್ದಾರೆ ಎನ್ನುವುದೇ ಗೊತ್ತಿಲ್ಲವೆಂದು ಹೇಳಿದ. "ನೀನು ಯಾವ ಅಪರಾಧಕ್ಕಾಗಿ ಬಂದೆ?" ಎಂದು ಆಹ್‌ಕ್ಯೂನನ್ನು ವಿಚಾರಿಸಿದರೆ, "ನಾನು ದಂಗೆ ಏಳಬೇಕೆಂದುಕೊಂಡೆ. ಅದಕ್ಕಾಗಿ ಬಂದೆ" ಎಂದ.

ಆ ದಿನ ಮಧ್ಯಾಹ್ನ ಅವನನ್ನು ತೆರೆದ ಬಾಗಿಲಿನಿಂದ ಎಳೆದುಕೊಂಡು ದೊಡ್ಡ ಹಜಾರವೊಂದಕ್ಕೆ ತಂದು ನಿಲ್ಲಿಸಿದರು. ದೂರದಲ್ಲಿ ನುಣ್ಣಗೆ ತಲೆ ಬೋಳಿಸಿದ್ದ ಮುದುಕನೊಬ್ಬ ಕುಳಿತಿದ್ದ. ಮೊದಲು ಅವನನ್ನು ಬೌದ್ಧ ಭಿಕ್ಷು ಇರಬೇಕೆಂದುಕೊಂಡ. ನಂತರ ಅವನ ಸುತ್ತ ಮುತ್ತ ಅವನ ಹಾಗೇ ಬೋಳಿಸಕೊಂಡವರಿದ್ದರೆ ಮತ್ತೆ ಕೆಲವರು ಭುಜಗಳ ತನಕ ವಿದೇಶಿ ಪಿಶಾಚಿ ಥರಾ ಕೂದಲು ಬೆಳೆಸಿದ್ದರು. ಅವರೆಲ್ಲರೂ ಇವನನ್ನು ದುರುಗುಟ್ಟಿ ನೋಡುತ್ತಿದ್ದರು. ಆಹ್‌ಕ್ಯೂ ಇವನ್ಯಾರೋ ಬಹಳ ಪ್ರಮುಖನಾದ ವ್ಯಕ್ತಿ ಇರಬೇಕೆಂದುಕೊಂಡ ತಕ್ಷಣ ಅವನ ಮೊಣಕಾಲುಗಳಲ್ಲಿನ ಜೋಮು ಬಿಟ್ಟಂತಾಗಿ, ಸ್ವಲ್ಪ ಆರಾಮವೆನಿಸಿತು.

"ನಿಂತುಕೊಂಡು ಮಾತಾಡು. ಮಂಡಿಯೂರಬೇಡ." ಉದ್ದನೆಯ ಅಂಗಿಗಳಲ್ಲಿ ಇದ್ದವರೆಲ್ಲ ಒಮ್ಮೆಲೇ ಅಬ್ಬರಿಸಿದರು.

ಆಹ್‌ಕ್ಯೂಗೆ ಅವರು ಹೇಳಿದ್ದು ಅರ್ಥವಾಗಿದ್ದರೂ ನಿಂತುಕೊಳ್ಳಲು ಸಾಧ್ಯವಾಗಲಿಲ್ಲ. ಅವನ ದೇಹ ಅಪ್ರಯತ್ನವಾಗಿ ಕುಳಿತುಕೊಳ್ಳುವ ಸ್ಥಿತಿಗೆ ಬಂತು. ನಂತರ ನಿಧಾನವಾಗಿ ಮಂಡಿ ಮೇಲೆ ನಿಂತ.

"ಗುಲಾಮ" ಉದ್ದನೆಯ ಕೋಟಿನ ಮನುಷ್ಯ ಜಿಗುಪ್ಸೆಯಿಂದ ಅಬ್ಬರಿಸಿದ. ಆದರೆ ನಿಂತುಕೊಳ್ಳಲೇಬೇಕೆಂದು ಒತ್ತಾಯ ಮಾಡಲಿಲ್ಲ.

"ನಿಜ ಹೇಳು. ಕಡಿಮೆ ಶಿಕ್ಷೆಯಾಗುತ್ತೆ"

ತಲೆ ಬೋಳಿಸಿಕೊಂಡಿದ್ದ ಮುದುಕ ಮೆದುವಾದ. ಆದರೆ ಸ್ಪಷ್ಟವಾದ ದನಿಯಲ್ಲಿ ಹೇಳಿದ. ಆಹ್‌ಕ್ಯೂನ ಮೇಲೆ ಕಣ್ಣುಗಳನ್ನು ಕೆಂದ್ರೀಕರಿಸಿದ್ದ ನನಗೆ ಈಗಾಗಲೇ ಎಲ್ಲಾ ಗೊತ್ತಿದೆ. ಅಪರಾಧ ಒಪ್ಪಿಕೊಂಡರೆ ಹೋಗಲು ಬಿಡುತ್ತೇನೆ."

"ಅಪರಾಧ ಒಪ್ಪಿಕೋ" ಉದ್ದನೆಯ ಕೋಟಿನ ಮನುಷ್ಯ ಜೋರಾಗಿ ಹೇಳಿದ.

"ವಿಷಯ ಏನೂಂದ್ರೆ.... ನನಗೆ.." ಅಸ್ಪಷ್ಟವಾಗಿ, ಅಸಂಭದ್ಧವಾಗಿ, ದಿಕ್ಕು

ತೋಚದೆ ಹೇಳಿದ. "ಹಾಗಿರುವಾಗ ನೀನು ಯಾಕೆ ಬರಲಿಲ್ಲ?" ಮುದುಕ ಮೆದುವಾಗಿ ಕೇಳಿದ.

"ಅನುಕರಣೆ ವಿದೇಶಿ ಪಿಶಾಚಿ, ಬರೋಕೆ ಬಿಡಲಿಲ್ಲ"

"ನಾನ್‌ಸೆನ್ಸ್. ಈಗ ಮಾತಾಡಿ ಪ್ರಯೋಜನವಿಲ್ಲ. ಎಲ್ಲಿ ನಿನ್ನ ಗೆಳೆಯರು?"

"ಏನು?"

"ಅದೇ ಆ ರಾತ್ರಿ ಚಾವೋ ಮನೆಗೆ ಕನ್ನ ಹಾಕಿದವರು"

"ನನ್ನನ್ನು ಕರೆಯೋಕೇ ಬರಲಿಲ್ಲ. ತಾವೇ ಸಾಮಾನೆಲ್ಲವನ್ನೂ ಸಾಗಿಸಿಬಿಟ್ಟರು. ಈ ಮಾತನ್ನು ಹೇಳಿದಾಗ ಆಹ್‌ಕ್ಯೂ ಸ್ವಲ್ಪ ಸಿಟ್ಟಾಗಿದ್ದ. ಅವರು ಹೋದದ್ದೆಲ್ಲಿಗೆ? ನನಗೆ ತಿಳಿಸಿದರೆ, ನಿನ್ನನ್ನು ಬಿಟ್ಟು ಬಿಡುತ್ತೇನೆ" ಇನ್ನಷ್ಟು ಮೆದುವಾಗಿ ಕೇಳಿದ, ಮುದುಕ.

"ನನಗೆ ಗೊತ್ತಿಲ್ಲ. ನನ್ನನ್ನು ಕರೆಯಲು ಅವರು ಬರಲಿಲ್ಲ..."

ಮುದುಕನ ಸಹಿಯ ನಂತರ ತೆರೆದ ಬಾಗಿಲ ಮೂಲಕ ಅವನನ್ನು ಎಳೆದೊಯ್ದರು. ಮಾರನೆಯ ದಿನ ಮತ್ತೊಮ್ಮೆ ಹೊರಗೆಳೆದು ತಂದರು.

ಆ ದೊಡ್ಡ ಹಜಾರದಲ್ಲಿ ಏನೊಂದೂ ವ್ಯತ್ಯಾಸವಾಗಿರಲಿಲ್ಲ. ನುಣ್ಣಗೆ ತಲೆ ಬೋಳಿಸಿದ್ದ ಮುದುಕ ತನ್ನ ಜಾಗದಲ್ಲಿ ಕುಳಿತಿದ್ದ. ಆಹ್‌ಕ್ಯೂ ಮತ್ತೆ ಮೊದಲಿನಂತೆ ಅವರ ಮುಂದೆ ಮಂಡಿಯೂರಿದ.

"ಇನ್ನೇನಾದರೂ ಹೇಳುವುದಿದೆಯಾ?" ಮುದುಕ ಪ್ರಶ್ನಿಸಿದ.

ಆಹ್‌ಕ್ಯೂ ಯೋಚನೆ ಮಾಡಿದ. ಹೇಳುವುದಕ್ಕೆ ಏನೂ ಇಲ್ಲವೆನಿಸಿತು. ಹೇಳಿದ- "ಏನೂ ಇಲ್ಲ".

ಆಗ ಉದ್ದನೆಯ ಕೋಟಿನ ಮನುಷ್ಯ ಒಂದು ಕಾಗದ ಹಾಳೆ ಮತ್ತು ಬ್ರಷ್ ತಂದು ಆಹ್‌ಕ್ಯೂ ಮುಂದೆ ಹಿಡಿದ. ಅದನ್ನು ಆಹ್‌ಕ್ಯೂ ಕೈಯಲ್ಲಿ ತುರುಕಬೇಕೆಂದುಕೊಂಡ. ಆಹ್‌ಕ್ಯೂಗೆ ಬುದ್ಧಿ ಸಾಯುವಷ್ಟು ಮಟ್ಟಿಗೆ ಹೆದರಿಕೆ ಆಯಿತು. ಅವನ ಜನ್ಮದಲ್ಲಿ ಮೊಟ್ಟ ಮೊದಲ ಸಲ ಬರೆಯುವ ಬ್ರಷ್ ಕೈಗೆ ಬಂದಿತ್ತು. ಅದನ್ನು ಯಾವ ಕಡೆ ಹಿಡಿದುಕೋಬೇಕು ಎನ್ನುವುದೂ ಗೊತ್ತಿರಲಿಲ್ಲ. ಸಹಿ ಮಾಡಬೇಕಾದ ಜಾಗ ತೋರಿಸುತ್ತಿದ್ದಾಗ ಅವನಿಗೆ ದಿಕ್ಕೇ ತೋಚಲಿಲ್ಲ.

"ನಂಗೆ... ನಂಗೆ... ಬರೆಯೋದಕ್ಕೆ ಬರೋದಿಲ್ಲ. ಬ್ರಷ್‌ನ್ನು ಕೈಲಿ ಹಿಡಿದು ನಾಚಿಕೆ, ಭಯ.ಸಂಕೋಚದಿಂದ ಹೇಳಿದ.

"ಹಾಗಿದ್ದರೆ ಒಂದು ಸುಲಭದ ದಾರಿ ಇದೆ. ಒಂದು ವೃತ್ತವನ್ನು ಬರೆ"

ಆಹ್‌ಕ್ಯೂ ವೃತ್ತ ಬರೆಯೋಕೆ ಎಷ್ಟೇ ಪ್ರಯತ್ನಿಸಿದರೂ, ಕೈಲಿದ್ದ ಬ್ರಷ್ ನಡುಗುತ್ತಿದ್ದುದರಿಂದ ಸಾಧ್ಯವೇ ಆಗಲಿಲ್ಲ. ಆ ವ್ಯಕ್ತಿ ಹಾಳೆಯನ್ನು ಆಹ್‌ಕ್ಯೂಗಾಗಿ ಕೆಳಗೆ ಹಾಸಿದ. ಆಹ್‌ಕ್ಯೂ ಕಷ್ಟಪಟ್ಟು, ತನ್ನ ಬದುಕೇ ಅದರ ಮೇಲಿದೆ ಅನ್ನೋ ಹಾಗೆ ಕಡೆಗೂ ವೃತ್ತ ಬರೆದ. ಜನ ನಗಬಹುದು ಅಂತ ಹೆದರಿ ವೃತ್ತವನ್ನು ಗುಂಡಗೆ ಮಾಡಲು ನಿರ್ಧರಿಸಿದ್ದ. ಆದರೆ ಆ ದರಿದ್ರ ಬ್ರಷ್ ಎಷ್ಟೋ ಕಾಟ ಕೊಟ್ಟು ಕಡೆಗೂ ಸಾಧಿಸಲು ಸಾಧ್ಯವಾಗದಂತೆ, ಆ ಕಡೆಗೆ ಈ ಕಡೆಗೆ ವಾಲುವಂತೆ ಮಾಡಿತು. ಇನ್ನೇನು ವೃತ್ತ ಪೂರ್ತಿಯಾಗಲಿದೆ ಎನ್ನುವ ಸಮಯಕ್ಕೆ ಕರಬೂಜದ ಬೀಜದಂತೆ ಆಯಿತು.

ತಾನು ಗುಂಡಗೆ ವೃತ್ತ ಮಾಡಲು ಆಗಲಿಲ್ಲವಲ್ಲ ಎಂದು ನಾಚಿಕೆ ಪಡುತ್ತಿರುವಷ್ಟರಲ್ಲಿ ಆ ಮನುಷ್ಯ ಏನನ್ನೂ ಟೀಕೆ ಮಾಡದೆ ಹಾಳೆಯನ್ನು ಅವನಿಂದ ಹಿಂದಕ್ಕೆ ಪಡೆದಿದ್ದ. ಅವನನ್ನು ಮತ್ತೆ ಮೂರನೆ ಸಲ ಒಂದಷ್ಟು ಮಂದಿ ಎಳೆದುಕೊಂಡು ಹೋದರು.

ಈ ಸಲ ಅವನಿಗೆ ಕೋಪ ಬರಲಿಲ್ಲ. ವೇದಾಂತಿ ತರ ಯೋಚನೆ ಮಾಡಿದ. ಬಹುಶಃ ಎಲ್ಲರ ಬದುಕಿನಲ್ಲಿ ಒಂದಲ್ಲ ಒಂದು ಸಲ ಹೀಗೆ ಕಟಕಟೆ ಒಳಗೆ ಹೊರಗೆ ಇರಬೇಕಾಗುತ್ತೆ. ಹಾಳೆ ಮೇಲೆ ವೃತ್ತಗಳನ್ನು ಬರೀಬೇಕಾಗುತ್ತೆ? ಎಂದುಕೊಂಡ. ಅವನಿಗೆ ನೋವಾದದ್ದು, ವೃತ್ತವನ್ನು ಗೋಲಾಕಾರದಲ್ಲಿ ಬರೆಯಲಾಗಲಿಲ್ಲವಲ್ಲ. ಅದು ತನ್ನ ವ್ಯಕ್ತಿತ್ವಕ್ಕೆ ಒಂದು ಮಚ್ಚೆ ಇದ್ದ ಹಾಗೆ ಎನ್ನುವ ಕಾರಣಕ್ಕೆ, ಕಡೆಗೆ, "ತಲೆ ಇಲ್ಲದವರು ಮಾತ್ರ ವೃತ್ತವನ್ನು ದುಂಡಗೆ ಮಾಡಲಿಕ್ಕೆ ಸಾಧ್ಯ" ಅಂತ ಯೋಚಿಸಿ ತನಗೆ ತಾನೇ ಸಮಾಧಾನ ತಂದುಕೊಂಡ. ಇದೇ ಯೋಚನೆಯಲ್ಲಿ ನಿದ್ದೆಮಾಡಿದ.

ಆದರೆ ಆ ರಾತ್ರಿಯೆಲ್ಲ ವಿಜೇತನಾದ ಪ್ರಾವೆನ್‌ಷಿಯಲ್ ಅಭ್ಯರ್ಥಿಗೆ ಅಷ್ಟಾಗಿ ಮರ್ಯಾದೆ ಕೊಡ್ತಿರಲಿಲ್ಲ. ಅದಕ್ಕಾಗಿ ಮೇಜಿನ ಮೇಲೆ ಮುಷ್ಠಿಯನ್ನು ಬಿಗಿ ಹಿಡಿದು ತೋರಿಸುತ್ತ, "ಒಬ್ಬನಿಗೆ ಶಿಕ್ಷೆ ಕೊಟ್ಟರೆ ನೂರು ಮಂದಿ ಹೆದರುತ್ತಾರೆ". ಈಗ ನೀನೇ ನೋಡು, ನಾನು ರೆವಲ್ಯೂಷನರೀ ಪಾರ್ಟಿಗೆ ಸೇರಿ ಇಪ್ಪತ್ತು ದಿವಸ ಕೂಡ ಆಗಿಲ್ಲ. ಡಜನ್‌ಗಿಂತಲೂ ಹೆಚ್ಚಿನ ಕಳ್ಳತನದ ಪ್ರಕರಣಗಳು. ಆದರೆ ಒಂದೂ ಪರಿಹಾರ ಆಗಿಲ್ಲ.

ಅದರ ಪ್ರಭಾವ ನನ್ನ ಮೇಲೆ ಏನಾಗಿರಬಹುದು? ಈಗ ಇದೊಂದು ಮಾತ್ರ ಪತ್ತೆಯಾಗಿದೆ. ನೀನು ಒಳ್ಳೆ ಪಾಂಡಿತ್ಯ ಪ್ರದರ್ಶಕನ ಥರ ಮಾತಾಡ್ತೀಯ. ಇದರಿಂದ ಏನೂ ಪ್ರಯೋಜನವಿಲ್ಲ! ಇದು ನನಗೆ ಬಿಟ್ಟದ್ದು.

ಚಾವೋ ಮಗನಿಗೆ (ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್) ಇದರಿಂದ ಸಮಾಧಾನವಾಗಲಿಲ್ಲ. ತುಂಬಾ ಬೇಸರ ಆಯಿತು. ಕಳುವಾದ ಮಾಲನ್ನು ಹುಡುಕಿಸಿ ತೆಗೆಯಲೇ ಬೇಕೆಂದು ಹಟ ಹಿಡಿದ. ಅಸಿಸ್ಟೆಂಟ್ ಸಿವಿಲ್ ಅಡ್ಮಿನಿಸ್ಟ್ರೇಟರಾಗಿ ತನ್ನ ಕಡೆಯಿಂದಲೇ ಹುಡುಕಾಟ ಪ್ರಾರಂಭಿಸುವುದಾಗಿ ಹೇಳಿದ. "ನಿನಗೆ ಇಷ್ಟ ಬಂದ ಹಾಗೆ ಮಾಡು" ಅಂತ ಕ್ಯಾಪ್ಟನ್ ಹೇಳಿದ.

ಇದರ ಪರಿಣಾಮದಿಂದ ಪ್ರಾವೆನ್‌ಷಿಯಲ್ ಕ್ಯಾಂಡಿಡೇಟ್‌ಗೆ ರಾತ್ರಿ ನಿದ್ದೇನೆ ಸರಿಯಾಗಿ ಬರಲಿಲ್ಲ. ಮಾರನೆ ದಿವಸ ಸಂತೋಷವಾಗಿ ತನ್ನ ರಾಜಿನಾಮೆನಂತೂ ಕೊಡಬೇಕಾಗಲಿಲ್ಲ.

ಮೂರನೆ ಸಲ ಆಹ್‌ಕ್ಯೂನ ಅದೇ ರಾತ್ರಿಯಾದ ಮೇಲೆ ಬೆಳಿಗ್ಗೆ ಎಳೆದುಕೊಂಡು ಕರೆದೊಯ್ದರು. ಸಭಾಂಗಣ ಅಥವಾ ದೊಡ್ಡ ಹಜಾರದಲ್ಲಿ ಮತ್ತೆ ಅದೇ ಮುದುಕ ಆಸೀನನಾಗಿದ್ದ. ಆಹ್‌ಕ್ಯೂ ಮಂಡಿಯೂರಿದ, ಮಾಮೂಲಿನಂತೆ ಕುಳಿತಿದ್ದ.

ಮುದುಕ ಮೃದುವಾಗಿ ಕೇಳಿದ, "ಏನಾದರೂ ನಿನಗೆ ಹೇಳುವುದಿದೆಯೇ?"

"ಏನೂ ಇಲ್ಲ" ಆಹ್‌ಕ್ಯೂ ತನಗೆ ಹೇಳಲು ಏನೂ ಇಲ್ಲವೆಂದು ಯೋಚಿಸಿ ಹೇಳಿದ.

ಉದ್ದನೆಯ ಕೋಟುಗಳಲ್ಲಿ, ತುಂಡಾದ ಜಾಕೆಟ್‌ಗಳಲ್ಲಿದ್ದ ಒಂದಷ್ಟು ಗಂಡಸರು ಇವನ ಬಳಿಗೆ ಬಂದು, ಇವನ ಮೇಲೆ ಬಿಳಿ ಬಟ್ಟೆಯನ್ನು ಹೊದಿಸಿದರು. ಅದರಲ್ಲಿ ಏನೇನೋ ಕಪ್ಪು ಚಿತ್ರಗಳಿದ್ದವು. ಇದು ಅಪಶಕುನದ ಸಂಕೇತ. ಇದು ಶೋಕದ ಉಡುಪಾಗಿತ್ತು. ಹಿಂದಿನಿಂದ ಎಳೆದೊಯ್ದರು.

ಆಹ್‌ಕ್ಯೂನನ್ನು ಎತ್ತಿ ತೆರೆದ ಗಾಡಿಯೊಂದರಲ್ಲಿ ಹಾಕಿದರು. ತುಂಡು ಜಾಕೆಟ್‌ಗಳಲ್ಲಿದ್ದ ಒಂದಷ್ಟು ಮಂದಿ ಅವನೊಂದಿಗೆ ಕುಳಿತರು. ತಕ್ಷಣವೇ ಗಾಡಿ ಚಲಿಸಿತು. ಮುಂದುಗಡೆ ಒಂದಷ್ಟು ಜನ ಸೈನಿಕರು, ಮಿಲಿಟರಿ ಸಿಬ್ಬಂದಿ ವಿದೇಶಿ ಬಂದೂಕುಗಳನ್ನು ಹೆಗಲಿಗೇರಿಸಿ ನಡೆಯುತ್ತಿದ್ದರು. ರಸ್ತೆಯ ಎರಡು ಬದಿಗಳಲ್ಲಿ ಕುತೂಹಲದಿಂದ ನೋಡುತ್ತಿರುವ ಮಂದಿ ಇದ್ದರು. ಹಿಂದೆ ಏನಿದೆ ಅನ್ನುವುದು ಮಾತ್ರ

ಆಹ್‌ಕ್ಯೂಗೆ ತಿಳಿದಿರಲಿಲ್ಲ. "ನನ್ನನ್ನೇನಾದರೂ ತಲೆ ಕಡಿಯಲು ಕರೆದೊಯ್ಯುತ್ತಿರಬಹುದೇ?" ಎಂಬ ಅನುಮಾನದ ಆಲೋಚನೆ ಬಂದದ್ದೇ ಅವನ ಕಣ್ಣು ಕತ್ತಲಿಟ್ಟಿತು. ಭಯ ಆವರಿಸಿತು. ಅವನ ಕಿವಿಯಲ್ಲಿ ಯಾರೋ ಗುನುಗುನಿಸಿದ ಸದ್ದಾಯಿತು. ಮೂರ್ಛೆ ಬಿದ್ದಿರುವೆನೋ ಎಂಬ ಭಾವನೆ ಬಂತು. ಆದರೆ ವಾಸ್ತವಾಗಿ ಮೂರ್ಛೆ ಬಿದ್ದಿರಲಿಲ್ಲ. ಸ್ವಲ್ಪ ಹೊತ್ತು ಭಯ ಬಿದ್ದಿರುವಂತೆ ಎನಿಸಿದರೂ ಪ್ರಶಾಂತವಾಗಿದ್ದ. "ಬದುಕಿನಲ್ಲಿ ಪ್ರತಿಯೊಬ್ಬರೂ ಈ ರೀತಿ ಒಂದಲ್ಲ ಒಂದು ಸಲ ತಲೆ ಕೆಡಿಸಿಕೊಳ್ಳಬೇಕಾದ ಪ್ರಸಂಗ ಇದ್ದೇ ಇರುತ್ತೇಂತ ಕಾಣುತ್ತೆ" ಎಂದುಕೊಂಡು ಸಮಾಧಾನ ಪಟ್ಟ.

ಅವನಿಗೆ ದಾರಿ ಅಥವಾ ರಸ್ತೆ ಗುರುತು ಹತ್ತಿತು. ಅವನಿಗೆ ತನ್ನನ್ನು ಮರಣ ದಂಡನೆಯ ಜಾಗಕ್ಕೇಕೆ ಕರೆದೊಯ್ಯುತ್ತಿಲ್ಲ ಎಂದು ಆಶ್ಚರ್ಯವಾಯಿತು. ಸಾರ್ವಜನಿಕರಲ್ಲಿ ಭಯ ಹುಟ್ಟಿಸಲು, ನಿದರ್ಶನವಾಗಿ ತೋರಿಸಲು ತನ್ನನ್ನು ಕರೆದೊಯ್ಯುತ್ತಿದ್ದಾರೆಂಬ ವಿಷಯ ಆವನಿಗೆ ತಿಳಿದಿರಲಿಲ್ಲ. ಆದರೆ ತಿಳಿದಿದ್ದರೂ ಪರಿಣಾಮ ಇಷ್ಟೇ. ಮತ್ತೆ ಅದೇ ಆಲೋಚನೆ ಬರುತ್ತಿತ್ತು. "ಪ್ರಪಂಚದಲ್ಲಿ ಬಹುಶಃ ಎಲ್ಲರ ಹಣೆಬರಹ, ಹೀಗೆ ಪಬ್ಲಿಕ್ ಮುಂದೆ ನಿದರ್ಶನವಾಗಿ ನಿಲ್ಲುವುದೇ ಆಗಿರುತ್ತಿತ್ತು!" ಎಂದು ಆಮೇಲೆ ಅವನಿಗೆ ಅರ್ಥ ಆಯಿತು. ಜನರಿಗೆ ತೋರಿಸುವುದಕ್ಕಾಗಿ ಹೀಗೆ ಸುತ್ತಾಡಿಸುತ್ತಿದ್ದಾರೆ ಎಂದು.

ವಧಾ ಸ್ಥಳಕ್ಕಂತೂ ಹೋಗಲೇ ಬೇಕಿತ್ತು. ಅವನ ತಲೆ ಕತ್ತರಿಸಲೇ ಬೇಕಾಗಿತ್ತು. ಪಶ್ಚಾತ್ತಾಪದಿಂದ ಸುತ್ತಲೂ ಕಣ್ಣು ಹಾಯಿಸಿದ. ಜನ ಇರುವೆಗಳ ಹಾಗೆ ಪಿಲಪಿಲನೆ, ನಿರೀಕ್ಷೆಗೂ ಮೀರಿದ ಪ್ರಮಾಣದಲ್ಲಿ ಸಂತೆಯಂತೆ ಸೇರುತ್ತಿದ್ದರು. ಆ ಗುಂಪಿನೊಳಗಿಂದ ಅಮಾಹ್‌ವು ಕಾಣಿಸಿದಳು. ಅದಕ್ಕೇ ಅವಳು ಅಷ್ಟು ದಿನ ಕಾಣಿಸಿರಲಿಲ್ಲ. ಕೆಲಸ ಮಾಡಲು ಪಟ್ಟಣ ಸೇರಿದ್ದಳು.

ಆಹ್‌ಕ್ಯೂಗೆ ಒಮ್ಮೆಲೇ ನಾಚಿಕೆ ಎನಿಸಿತು. ಅವನಲ್ಲಿ ಉತ್ಸಾಹ ಕುಂದಿತ್ತು. ಯಾವುದೆ ಅಪೆರಾದ ಒಂದು ಸಾಲನ್ನೂ ಹೇಳಿಕೊಂಡಿರಲಿಲ್ಲ. ಅವನ ಆಲೋಚನೆಗಳು ಸುಳಿಗಾಳಿಯಂತೆ ಸುತ್ತಿದವು. "ಯುವ ವಿಧವೆ ಗಂಡನ ಸಮಾಧಿ ಬಳಿ ಇರಲು, ಅದು ಸಾಹಸವೇನಲ್ಲ!" ನಾನು ಕೊಂದಿರಲಳಲುವೆ" ಎನ್ನುವ ಸಾಲು ಡ್ರ್ಯಾಗನ್ ಮತ್ತು ಹುಲಿಯ ಸಮರದುದ್ದ ಯಾಕೋ ಸಪ್ಪೆ ಎನಿಸಿತ್ತು. "ಕಬ್ಬಿಣ ಸರಳನ್ನು

ಹಿಡಿಯುತ ಕೊಲ್ಲುವೆ" ಎಂಬುದೇ ವಾಸಿ. ತನ್ನ ಕೈಗಳನ್ನು ಮೇಲೆತ್ತಬೇಕೆಂದುಕೊಂಡ. ಹಿಂದಿನಿಂದ ಅವುಗಳನ್ನು ಕಟ್ಟಿ ಹಾಕಿದ್ದನ್ನು ನೆನಪಿಸಿಕೊಂಡ. ಅದಕ್ಕೆ ಹೇಳಬೇಕೆಂದುಕೊಂಡ, ಕಬ್ಬಿಣದ ಸರಳು...., ಸಾಲನ್ನು ಹೇಳಲೇ ಇಲ್ಲ.

ಇನ್ನು ಇಪ್ಪತ್ತು ವರ್ಷಗಳಲ್ಲಿ ನಾನು ಇನ್ನೊಬ್ಬ ಬಲಿಷ್ಠ ಯುವಕನಾಗುತ್ತೇನೆ. (ಸಾಮಾನ್ಯವಾಗಿ ಎಲ್ಲ ಅಪರಾಧಿಗಳು, ತಮಗೆ ಸಾವಿನ ಬಗ್ಗೆ ಇದ್ದ ಧಿಕ್ಕಾರವನ್ನು ಸೂಚಿಸಲು ಹೀಗೆ ಹೇಳಿಕೊಳ್ಳುತ್ತಿದ್ದರು). ಮೇಲಿನ ಸಾಲನ್ನು ಅರ್ಧ ಮಾತ್ರ ಕಲಿತಿದ್ದ. ಮುಂದಿನದನ್ನು ಅವನು ಅಭ್ಯಾಸ ಮಾಡಿರಲಿಲ್ಲ. ನೆರದಿದ್ದ ಗುಂಪು "ಒಳ್ಳೆಯದು!" ಎಂದು ಕಿರುಚಿತು. ಆದರೆ ಅದು ತೋಳಗಳ ಊಳಿನಂತೆ ಕೇಳಿಸಿತು.

ಗಾಡಿ ನೇರವಾಗಿ ಮುಂದೆ ಸಾಗಿತು. ಕೂಗಿನ ಮಧ್ಯೆ ಆಹ್‌ಕ್ಯೂ ಅಮಾಹ್‌ವುಳಿಗಾಗಿ ಅರಸುತ್ತಿದ್ದ. ಅವನು ಅವಳನ್ನು ನೋಡಿದರೂ, ಅವಳು ಮಾತ್ರ ಇವನ ಕಡೆ ನೋಡದೆ ಸೈನಿಕರು ಹೊತ್ತ ವಿದೇಶಿ ಬಂದೂಕುಗಳನ್ನು ನೋಡುತ್ತಿದ್ದಳು. ಅದಕೆ ಆಹ್‌ಕ್ಯೂ ಕೂಗುತ್ತಿರುವ ಗುಂಪಿನ ಕಡೆ ನೋಡಿದ.

ಆ ಕ್ಷಣಕ್ಕೆ ಅವನ ತಲೆಯಲ್ಲಿ ಆಲೋಚನೆಗಳ ಸುಳಿಯೆದ್ದಿತು. ನಾಲ್ಕು ವರ್ಷಗಳ ಹಿಂದೆ ಬೆಟ್ಟದ ತಪ್ಪಲಲ್ಲಿ ಒಂದು ಹಸಿದ ತೋಳ ಇವನಿಗೆ ಎದುರಾಗಿತ್ತು. ತಿನ್ನಲು ಇವನನ್ನೇ ಹಿಂಬಾಲಿಸಿ ನಡೆದಿತ್ತು. ಭಯದಿಂದ ಹೆಚ್ಚು ಕಡಿಮೆ ಸತ್ತೇ ಹೋಗಿದ್ದ. ಅದೃಷ್ಟಕ್ಕೆ ಆಗ ಅವನ ಕೈಯ್ಯಲ್ಲಿ ಕೊಡಲಿ ಇತ್ತು. ಅದೇ ಅವನಿಗೆ ವಿಷುವಾಂಗ್‌ನ್ನು ತಲುಪಲು ಧೈರ್ಯ ನೀಡಿತ್ತು. ತೋಳದ ಕಣ್ಣುಗಳನ್ನು ಮರೆತಿರಲಿಲ್ಲ. ನೋಡಲು ಭಯಂಕರವಾಗಿತ್ತಾದರೂ ಅದರಲ್ಲಿ ಹೇಡಿತನವನ್ನೇ ಗಮನಿಸಿದ್ದ. ಏನಿದ್ದರೂ ದೂರದಿಂದಲೇ ತನ್ನನ್ನು ತಿವಿಯುವಂತೆ ನೋಡುತ್ತಿತ್ತು. ಈಗ ಅವನ ಕಣ್ಣುಗಳನ್ನು ಗಮನಿಸಿದ. ತೋಳದ ಕಣ್ಣುಗಳಿಗಿಂತ ಕ್ರೂರವಾಗಿದ್ದವು. ಕಾಂತಿಹೀನವಾಗಿತ್ತು. ಆದರೆ ನೋಟ ತಿವಿಯುವಂತೆ ಇತ್ತು. ತನ್ನ ಶಬ್ಧಗಳನ್ನು ಕಿತ್ತು ತಿನ್ನುತ್ತಿದ್ದವು. ಆದರೆ ಈಗ ತನ್ನ ರಕ್ತ ಮಾಂಸದ ಆಚೆಗೂ ಏನನ್ನೋ ತಿನ್ನಲು ಬಯಸುವಂತಿದ್ದವು.

ಎಲ್ಲ ಕಣ್ಣುಗಳೂ ಒಂದಾಗಿ ಕೂಡಿ ತನ್ನ ಆತ್ಮವನ್ನು ಬಗಿಯುತ್ತಿತ್ತು.

"ಸಹಾಯ ಮಾಡಿ! ಸಹಾಯ ಮಾಡಿ!"

ಆಹ್‌ಕ್ಯೂ ಈ ಮಾತುಗಳನ್ನು ಉಚ್ಚರಿಸಲೇ ಇಲ್ಲ. ಎಲ್ಲವೂ ಕತ್ತಲಲ್ಲಿ

ಲೀನವಾಗಿತ್ತು. ಕಿವಿಯಲ್ಲಿ ಮಾತ್ರ ಗುಂಯ್ ಗುಡುವ ಶಬ್ಧ. ತನ್ನ ದೇಹ ಹಗುರಾದ ಹುಡಿಯ ಹಾಗೆ ಚೆಲ್ಲಾಪಿಲ್ಲಿಯಾದಂತೆನಿಸಿತು.

ಕಳ್ಳತನದಿಂದಾದ ಹೆಚ್ಚಿನ ನಷ್ಟವನ್ನು ಅನುಭವಿಸಿದವನು, ನಂತರ ಎದುರಾದ ಪರಿಣಾಮಗಳಿಗೆ ಒಳಗಾದವನೆಂದರೆ ಪ್ರಾವೆನ್ಷಿಯಲ್ ಅಭ್ಯರ್ಥಿ. ಯಾಕೆಂದರೆ ಕಳುವಾದ ವಸ್ತುಗಳು ಸಿಗಲೇ ಇಲ್ಲ. ಅವನ ಕುಟುಂಬವೆಲ್ಲ ತಲೆಯ ಮೇಲೆ ಕೈ ಹೊತ್ತು ಕುಳಿತಿತ್ತು. ನಂತರದ ಕುಟುಂಬವೆಲ್ಲ ತಲೆಯ ಮೇಲೆ ಕೈ ಹೊತ್ತು ಕುಳಿತಿತ್ತು. ನಂತರದವನೆಂದರೆ ಚಾವೋ. ಕಂಟ್ರಿ ಅಭ್ಯರ್ಥಿ ಪಟ್ಟಣಕ್ಕೆ ಹೋಗಿ ರಿಪೋರ್ಟ್ ಬರೆಸಬೇಕೆಂದಾಗ, ಆ ಕೆಟ್ಟ ದಂಗೆ ಕೋರರು ಪಿಗ್‌ಟೈಲ್ ಕತ್ತರಿಸಿದ್ದಷ್ಟೇ ಅಲ್ಲದೆ, ಬಹುಮಾನ ರೂಪದಲ್ಲಿ ೨೦ ಸಾವಿರ ಹಣವನ್ನು ಈ ಚೌಕಾಶಿಯಲ್ಲಿ ಕಳೆದುಕೊಂಡಿದ್ದ. ಆದ್ದರಿಂದ ಇಡೀ ಕುಟುಂಬವೇ ಶೋಕಸಾಗರದಲ್ಲಿ ಮುಳುಗಿತ್ತು. ಅದಾದ ನಂತರ, ಆ ದಿನದಿಂದ ಉಳಿದು ಬದುಕಿದ ವಂಶದವರ ಹಾಗೆ ನಡೆದುಕೊಳ್ಳ ತೊಡಗಿದರು.

ಈ ಘಟನೆಗೆ ಸಂಬಂಧಿಸಿದಂತೆ ಚರ್ಚೆಯಾಗಲೀ, ಪ್ರಶ್ನೆಗಳಾಗಲೀ ವೀಷುವಾಂಗ್‌ನಲ್ಲಿ ಕೇಳಿ ಬರಲಿಲ್ಲ. ಒಮ್ಮತದ ಒಂದೇ ಒಂದು ಅಬೀಪ್ರಾಯ ಕೇಳಿಸಿದ್ದು, ಆಹ್‌ಕ್ಯೂ ಕೆಟ್ಟವನು; ಅವನಿಗೆ ಆದ ಮರಣದಂಡನೆಯೇ ಅದಕ್ಕೆ ಸಾಕ್ಷಿ. ಅವನು ಕೆಟ್ಟವನಲ್ಲದೆ ಹೋಗಿದ್ದರೆ, ಅವನನ್ನೇಕೆ ಸಾಯಿಸುತ್ತಿದ್ದರು? ಪಟ್ಟಣದಲ್ಲಿ ಮಾತ್ರ ಅಭಿಪ್ರಾಯ ಅಷ್ಟು ಅನುಕೂಲವಾಗಿರಲಿಲ್ಲ. ಗುಂಡಿಟ್ಟು ಕೊಲ್ಲುವ ನೋಟ ಅಂತಹ ರೋಮಾಂಚಕಾರಿ ಏನಲ್ಲ. ಅವನೆಂತಹ ಭಯಂಕರ ಅಪರಾಧಿಯಾಗಿದ್ದರೂ ಅಪೆರಾದ ಒಂದು ಸಾಲನ್ನೂ, ರಸ್ತೆಯಲ್ಲಿ ಕೊಂಡೊಯ್ಯುತ್ತಿದ್ದಾಗ, ಹಾಡಲೇ ಇಲ್ಲ. ಅವನನ್ನು ಹಿಂಬಾಲಿಸಿದ್ದು ಬರೀ ವ್ಯರ್ಥ!

~~~o~~~
~~~

# ಚಂದ್ರನೆಡೆಗೆ

ಮನುಷ್ಯರ ಆಕಾಂಕ್ಷೆ ಬುದ್ಧಿವಂತ ಪ್ರಾಣಿಗಳಿಂದ ಸಾಕಾರಗೊಳ್ಳುತ್ತದೆ ಎನ್ನುವ ಮಾತು ಸತ್ಯ. ಗೇಟು ಕಣ್ಣಿಗೆ ಬೀಳುತ್ತಿದ್ದಂತೆ ಕುದುರೆ ತನ್ನ ನಡಿಗೆಯನ್ನು ನಿಧಾನವಾಗಿಸಿತು. ತನ್ನ ಸವಾರ ಇಳಿಯುತ್ತಿದ್ದಂತೆ ತಲೇನ ಕೆಳಗೆ ಹಾಕಿ ನಿಧಾನವಾಗಿ, ಅಕ್ಕಿ ಕುಟ್ಟುವ ಒನಕೆಯ ಶಬ್ದದಂತೆ ಶಬ್ಧ ಮಾಡುತ್ತ ಹೆಜ್ಜೆ ಹಾಕತೊಡಗಿತು.

ಸಂಜೆಯ ಮಂಜು ಮನೆ ಮೇಲೆ ಕವಿದಿತ್ತು. ನೆರೆ ಹೊರೆಯವರ ಮನೆಗಳ ಚಿಮ್ನಿಗಳಿಂದ ಕಪ್ಪು ಹೊಗೆಯೇಳುತ್ತಿತ್ತು. ಅದು ರಾತ್ರಿ ಊಟದ ಸಮಯವಾಗಿತ್ತು. ಕುದುರೆ ಗೊರಸಿನ ಸದ್ದು ಕೇಳಿ ಬರುತ್ತಿದ್ದಂತೆ, ಸೇವಕರು ಹೊರಗೆ ಬಂದು ನೆಟ್ಟಗೆ ಶಿಸ್ತಿನಿಂದ ಕೈಕಟ್ಟಿಕೊಂಡು ಪ್ರವೇಶ ದ್ವಾರದ ಬಳಿ ನಿಂತರು. "ಯೀ" ಬೇಸರದಿಂದಲೇ ದೊಡ್ಡ ಕಸದ ರಾಶಿಯ ಪಕ್ಕದಲ್ಲಿ ಇಳಿದು ನಿಂತ. ಸೇವಕರು ಲಗಾಮು, ಜೇನುಗಳನ್ನು ಅವನಿಂದ ತೆಗೆದುಕೊಳ್ಳಲು ಮುಂದೆ ಬಂದರು. ಹೊಸ್ತಿಲು ದಾಟಿ ಒಳಹೋಗುವ ಸಮಯದಲ್ಲಿ ತನ್ನ ಸೊಂಟದಲ್ಲಿದ್ದ ಬತ್ತಳಿಕೆಯಲ್ಲಿನ ಹೊಸದಾದ ಬಾಣಗಳನ್ನು ಮೂರು ಕಾಗೆ ಮತ್ತು ಚಿಂದಿಯಾಗಿದ್ದ ಗುಬ್ಬಚ್ಚಿಯಿದ್ದ ಚೀಲವನ್ನು ಗಮನಿಸಿದ. ಮನಸ್ಸು ಸ್ವಲ್ಪ ಮುದುಡಿತು. ಆದರೂ ಗೆಲುವಾಗಿ ಕಾಣಿಸಿಕೊಳ್ಳುತ್ತಾ, ತನ್ನ ಬತ್ತಳಿಕೆಯಲ್ಲಿನ ಬಾಣಗಳನ್ನು ಸದ್ದು ಮಾಡುತ್ತಾ ಒಳ ನಡೆದ.

ಒಳ ಅಂಗಳಕ್ಕೆ ಹೋದ ಮೇಲೆ, ಚ್ಯಾಂಗೋ ಕಿಟಕಿಯಿಂದ ನೋಡುತ್ತಿದ್ದುದನ್ನು ನೋಡಿದ: ಅವಳ ತೀಕ್ಷ್ಣವಾದ ಕಣ್ಣುಗಳು ಕಾಗೆಗಳನ್ನು ಗಮನಿಸಿರಬೇಕು. ಗಾಬರಿಯಿಂದ ಒಮ್ಮೆಲೇ ನಿಂತುಬಿಟ್ಟ. ಆದರೆ ಅವನಿಗೆ ಒಳಗೆ ಹೋಗಬೇಕಿತ್ತು. ಸೇವಕಿಯುರು ಅವನನ್ನು ಸ್ವಾಗತಿಸಲು ಹೊರಗೆ ಬಂದರು. ಅವನು ನೇತುಹಾಕಿಕೊಂಡಿದ್ದ ಬಿಲ್ಲು ಬಾಣ ಬತ್ತಳಿಕೆಗಳನ್ನು ಅವನಿಂದ ಕಳಚಿದರು. ಅವನ ಬೇಟೆಯ ಚೀಲವನ್ನು ಕೈಗೆ ತೆಗೆದುಕೊಂಡರು. ಅವರ ಮುಗುಳ್ನಗೆ ಬಲವಂತದ್ದೆಂದು ಗಮನಿಸಿದ.

ಮುಖ ಕೈಗಳನ್ನು ಒರೆಸಿಕೊಂಡ ಮೇಲೆ ಒಳಭಾಗಕ್ಕೆ ನಡೆದು 'ಮೇಡಂ' ಎಂದ.

ಚ್ಯಾಂಗೋ ಗೋಲಾಕಾರವಾಗಿದ್ದ ಕಿಟಕಿಯಿಂದ ಸೂರ್ಯಾಸ್ತವನ್ನು ಗಮನಿಸುತ್ತಿದ್ದಳು. ನಿಧಾನವಾಗಿ ತಿರುಗಿ, ಅವನನ್ನು ಎದುರುಗೊಳ್ಳದೆ, ನಿರ್ಲಕ್ಷ್ಯದಿಂದ ಮುಖ ತಿರುಗಿಸಿದಳು.

ಅವಳ ಈ ರೀತಿಯ ನಡವಳಿಕೆ ಇತ್ತೀಚೆಗೆ ಅದೂ ಒಂದು ವರ್ಷದಿಂದ ಅವನಿಗೆ ಅಭ್ಯಾಸವಾಗಿ ಹೋಗಿತ್ತು. ಆದರೂ ಮಾಮೂಲಿನಂತೆ ಒಳಗೆ ಹೋಗಿ ಮರದ ಸೋಫಾದ ಮೇಲೆ ಹಾಸಿದ್ದ ಹಳೆಯ ಚಿರತೆ ಚರ್ಮದ ಮೇಲೆ ಅವಳಿಗೆ ಎದುರಾಗಿ ಕುಳಿತ. ತಲೆ ಕೆರೆದುಕೊಳ್ಳುತ್ತ ಗೊಣಗುವ ದನಿಯಲ್ಲಿ ಹೇಳಿದ, "ಈ ದಿನ ಕೂಡ ನನ್ನ ಅದೃಷ್ಟ ಚೆನ್ನಾಗಿಲ್ಲ. ಕಾಗೆ ಬಿಟ್ಟು ಮತ್ತೇನೂ ಸಿಗಲಿಲ್ಲ...."

"ಘೂಹ್!"

ತನ್ನ ನೀಟಾದ ಹುಬ್ಬುಗಳನ್ನು ಏರಿಸಿ, ಚ್ಯಾಂಗೋ ಎದ್ದು ನಿಂತು ಕೋಣೆಯಿಂದ ಹೊರಗೆ ನಡೆಯುತ್ತ ಗೊಣಗಿಕೊಂಡಳು.

"ಮತ್ತೆ ಅದೇ ನೂಡಲ್ಸ್ ಮತ್ತು ಕಾಗೆ ಸಾಸ್! ಅದು ಯಾರು ತಾನೇ ವರ್ಷ ಪೂರ್ತಿ, ಮತ್ತೂ ಮುಂದಿನ ವರ್ಷಕ್ಕೆ ನೂಡಲ್ಸ್ ಮತ್ತು ಕಾಗೆ ಸಾಸ್ ತಿಂತಾರೋ ನನಗಂತೂ ಗೊತ್ತಿಲ್ಲ. ವರ್ಷ ಪೂರ್ತಿ ಇದನ್ನೇ ತಿನ್ನೋಕೆ, ನಿನ್ನನ್ನು ಮದುವೆ ಮಾಡಿಕೊಂಡು ಅದೇನು ಪಾಪ ಮಾಡಿದ್ದೆನೋ?"

"ಮೇಡಂ!" ಯೀ ಜಿಗಿದು ಅವಳ ಕಾಲ ಬಳಿ ನಡೆದು ಅವಳನ್ನೇ ಹಿಂಬಾಲಿಸಿದ. ಇವತ್ತು ಅಂಥದ್ದೇನೂ ಕೆಟ್ಟದ್ದಾಗಿಲ್ಲ. ಒಂದು ಗುಬ್ಬಚ್ಚೀನೂ ಸಿಕ್ಕಿದೆ. ಮಾತನ್ನು ಮೆಲ್ಲಗೆ ಮುಂದುವರೆಸಿದ. ಅದನ್ನೇ ಒಳ್ಳೆ ಅಡಿಗೆ ಮಾಡಬಹುದು ನಿಮಗಾಗಿ. "ನೂ ಷೀನ್!" ಸೇವಕಿಯನ್ನು ಕರೆದ.

"ನಿನ್ನ ಯಜಮಾನಿಗೆ ತೋರಿಸಲು ಆ ಗುಬ್ಬಚ್ಚಿಯನ್ನು ತೆಗೆದುಕೊಂಡು ಬಾ." ಸತ್ತ ಹಕ್ಕಿಗಳನ್ನು ಅಡಿಗೆ ಮನೆಗೆ ತೆಗೆದುಕೊಂಡು ಹೋದರು. ನೂ-ಷಿನ್ ಗುಬ್ಬಚ್ಚಿಯನ್ನು ತಂದು ಎರಡೂ ಕೈಗಳಲ್ಲಿ ಹಿಡಿದು ಚ್ಯಾಂಗೋ ಮುಂದೆ ಹಿಡಿದಳು. "ಅದಾ!" ತಿರಸ್ಕಾರದ ನೋಟ ಬೀರಿ ಮೆಲ್ಲಗೆ ಕೈ ಚಾಚಿ ಅದನ್ನು ಸ್ಪರ್ಶಿಸಿದಳು. "ಎಷ್ಟು ಅಸಹ್ಯ!" ಮುಖ ಕಿವುಚಿ ಹೇಳಿದಳು. "ನೀನಂತೂ ಚೂರು ಚೂರು ಮಾಡಿ ಬಿಟ್ಟಿದ್ದೀಯ, ಎಲ್ಲಿದೆ ಮಾಂಸ?"

"ನನಗೆ ಗೊತ್ತು" ಯೀ ಮುಜುಗರದಿಂದಲೇ ಒಪ್ಪಿಕೊಂಡ. "ನನ್ನ ಬಿಲ್ಲು ಬಹಳ ಶಕ್ತವಾದದ್ದು. ನನ್ನ ಬಾಣಗಳು ಬಹಳ ಅಗಲ."

"ಸಣ್ಣ ಬಾಣಗಳನ್ನು ಬಳಸಬಾರದೇ?'

"ನನ್ನ ಹತ್ತಿರ ಒಂದೂ ಇಲ್ಲ. ನಾನು ಒಂದು ದೊಡ್ಡ ಹಂದಿಯನ್ನು ಹೆಬ್ಬಾವನ್ನು ಹೊಡೆದಾಗ...."

"ಇದೇನು ದೊಡ್ಡ ಹಂದೀನಾ ಇಲ್ಲ ಹೆಬ್ಬಾವಾ?"

ನೂ-ಷಿನ್ ಕಡೆ ತಿರುಗಿ ಹೇಳಿದಳು. "ಇದನ್ನು ಸೂಪ್‌ಗೆ ಉಪಯೋಗಿಸಿ." ನಂತರ ಅವಳು ತನ್ನ ಕೋಣೆಗೆ ಹೋದಳು.

ನಿರಾಸೆಯಿಂದ ಯೀ ಗೋಡೆಗೆ ಒರಗಿ, ಅಡಿಗೆ ಮನೆಯಿಂದ ಉರಿಯುವ ಸೌದೆ ಉಂಟು ಮಾಡುತ್ತಿದ್ದ ಚಿಟ್ ಚಿಟಿಲ್ ಶಬ್ದ ಕೇಳುತ್ತಾ ಕುಳಿತ. ದೈತ್ಯಾಕಾರದ ಹಂದಿ ಅವನ ಕಣ್ಮುಂದೆ ಒಂದು ಸಣ್ಣ ಗುಡ್ಡದ ತೆರದಲ್ಲಿ ದೂರದಲ್ಲಿ ಮೂಡಿದ್ದನ್ನು ನೆನಪಿಸಿಕೊಂಡ. ಅದನ್ನು ಆಗ ಹೊಡೆದು ಸಾಯಿಸದಿದ್ದರೆ, ಇವತ್ತಿನವರೆಗೂ ಹಾಗೇ ಬಿಟ್ಟಿದ್ದರೆ ಕಡೇ ಪಕ್ಷ ಆರು ತಿಂಗಳವರೆಗೆ ಮಾಂಸ ಸಿಗುತ್ತಿತ್ತು. ಅಲ್ಲದೆ ದಿನಾ ಈ ರೀತಿ ಊಟಕ್ಕಾಗಿ ತಲೆ ಕೆಡಿಸಿಕೊಳ್ಳೋದು ತಪ್ಪುತ್ತಿತ್ತು. ಆ ದೊಡ್ಡ ಹೆಬ್ಬಾವು! ಎಂಥೆಂಥ ಸೂಪ್‌ಗಳನ್ನು ಮಾಡಬಹುದಿತ್ತು!

ನೂ-ಯೀ ದೀಪ ಹಚ್ಚಿದಳು. ದೀಪದ ಬೆಳಕಿನಲ್ಲಿ ಕೆಂಪು ಬಣ್ಣದ ಗೋಡೆಗೆ ಹೊಂದಿಕೊಂಡಿದ್ದ ಕಪ್ಪು ಬಣ್ಣದ ಬಿಲ್ಲುಗಳು, ಅಡ್ಡ ಬಿಲ್ಲು, ಕತ್ತಿ, ಬಾಕು ಹೊಳೆದವು. ಯೀ ತಲೆ ಬಗ್ಗಿಸಿ, ಒಂದು ನಿಟ್ಟುಸಿರೆಳೆದ. ನೂಷಿನ್ ಊಟ ತಂದು ಮಧ್ಯದ ಮೇಜಿನ ಮೇಲೆ ಇರಿಸಿದಳು. ಎಡಗಡೆ ದೊಡ್ಡದಾದ ಐದು ಬಟ್ಟಲುಗಳಲ್ಲಿ ನೂಡಲ್ಸ್, ಬಲಗಡೆ ಎರಡು ದೊಡ್ಡ ಬಟ್ಟಲುಗಳಲ್ಲಿ ನೂಡಲ್ಸ್ ಮತ್ತು ಸೂಪ್, ಮಧ್ಯದಲ್ಲಿ ದೊಡ್ಡ ಬಟ್ಟಲೊಂದರಲ್ಲಿ ಕಾಗೆ ಸೂಪ್ ಇರಿಸಿದಳು.

ಊಟ ಮಾಡಲು ಕುಳಿತಾಗ, ಯೀಗೆ ಇದು ನಿಜವಾಗಿ ಸರಿಯಾದ ಊಟವಲ್ಲ ಎನ್ನುವುದನ್ನು ಒಪ್ಪಿಕೊಳ್ಳಬೇಕಾಯಿತು. ಚ್ಯಾಂಗೋಳತ್ತ ಒಮ್ಮೆ ನೋಡಿದ, ಕಾಗೆ ಸೂಪಿನ ಕಡೆ ಸಾಧ್ಯವಾದಷ್ಟು ಕಣ್ಣು ತಪ್ಪಿಸಿ. ನೂಡಲ್ಸ್‌ನ್ನು ಸಾಸಿನಲ್ಲಿ ಮುಳುಗಿಸಿ ಅರ್ಧ ಮಾತ್ರ ತಿಂದು ಕೆಳಗಿರಿಸಿದಳು. ಅವಳ ಮುಖ ಮೊದಲಿಗಿಂತ ಬಿಳುಚಿಕೊಂಡಿದೆ. ಕೃಶವಾಗಿದೆ ಎನ್ನುವುದನ್ನು ಯೀ ಗಮನಿಸಿದ. ಅವಳೇನದರೂ ಖಾಯಿಲೆ ಬಿದ್ದರೆ?

ಎರಡನೆ ಸಲ ನೋಡಿದಾಗ, ಅವಳು ಸ್ವಲ್ಪ ಗೆಲುವಿನಿಂದ, ಆದರೆ ಒಂದ ಮಾತೂ ಆಡದೆ, ಮಂಚದ ತುದಿಯಲ್ಲಿ ನೀರು ಕುಡಿಯಲು ಕುಳಿತಳು. ಯೀ ಮರದ ಸೋಫಾ ಮೇಲೆ, ಚಿರತೆ ಚರ್ಮವನ್ನು ತಟ್ಟುತ್ತಾ ಕುಳಿತ.

"ಆಹ್! ನಾವು ಮದುವೆ ಆಗೋಕೆ ಮೊದಲು ಪಶ್ಚಿಮ ಘಟ್ಟಗಳಲ್ಲಿ ಇದನ್ನು ನಾನು ಸಂಪಾದಿಸಿದೆ" ಎಂದು ಸಮಾಧಾನ ಪಡಿಸುವ ದನಿಯಲ್ಲಿ ಹೇಳಿದ. "ಎಷ್ಟು ಚೆನ್ನಾಗಿತ್ತೂ ಅಂತ! ಹೊಳೆವ ಚಿನ್ನದ ರಾಶಿ!"

ಹಿಂದೆ ತಾವು ಹೇಗೆ ಇದ್ದೆವು ಎನ್ನುವುದನ್ನು ಅದು ನೆನಪಿಗೆ ತಂದಿತು. ಕರಡಿಯ ಪಂಜುಗಳು, ಒಂಟೆ ಡುಬ್ಬು ಬಿಟ್ಟು ಬೇರೇನೂ ತಿನ್ನುತ್ತಿರಲಿಲ್ಲ. ಆ ಪ್ರಾಣಿಗಳ ಉಳಿದ ಭಾಗಗಳನ್ನೆಲ್ಲ ಕೆಲಸದವರಿಗೆ ಕೊಟ್ಟುಬಿಡುತ್ತಿದ್ದರು. ದೊಡ್ಡ ಬೇಟೆ ಮುಗಿಸಿದ ಮೇಲೆ ಮೊಲಗಳು, ಹಂದಿಗಳು ಮತ್ತು ಒಂದು ಜಾತಿಯ ಹಕ್ಕಿಗಳನ್ನು ತಿನ್ನುತ್ತಿದ್ದರು. ಅವನು ಬಹಳ ಒಳ್ಳೆಯ ಬಿಲ್ಲುಗಾರನಾಗಿದ್ದ. ತನಗಿಷ್ಟ ಬಂದಷ್ಟು ಬೇಟೆಯಾಡುತ್ತಿದ್ದ.

ಒಂದು ನಿಟ್ಟುಸಿರು ಹೊರಟಿತು.

"ನಾನು ಒಳ್ಳೆಯ ಗುರಿಕಾರ ಆಗಿರುವುದೇ ಒಂದು ವಿಶೇಷ." ಅವನು ಹೇಳಿದ. "ಬಹುಶಃ ಅದಕ್ಕೇ ಜಾಗಾನೆಲ್ಲ ಶುಚಿಮಾಡಿ, ತೆರವು ಮಾಡಿ ಇಟ್ಟಿದ್ದಾರೆ. ಯಾರಿಗೆ ಗೊತ್ತಿತ್ತು ಬರೀ ಕಾಗೆ ಬಿಟ್ಟರೆ ಇವತ್ತು ನಮ್ಮ ಹಣೇಲಿ ಏನೂ ಬರೆದಿಲ್ಲಾಂತ!"

ಚಾಂಗೋ ಮುಗುಳ್ನಗೆ ಬಿಂಬಿಸಿದಳು.

"ಹಾಗೆ ನೋಡಿದರೆ ಬೇರೆ ದಿವಸಗಳಿಗಿಂತ ಇವತ್ತು ನನ್ನ ಅದೃಷ್ಟ ಚೆನ್ನಾಗಿತ್ತು. ಕಡೇ ಪಕ್ಷ ಒಂದು ಗುಬ್ಬಚ್ಚಿಯಾದರೂ ಸಿಕ್ಕಿತು. ಇಲ್ಲಾಂದ್ರೆ ಅದಕ್ಕಾಗಿ ಒಂದು ಮೂವತ್ತು ಲೀ ಬೇರೆ ನಡೀಬೇಕಾಗ್ತಿತ್ತು." ಬಹಳ ಉತ್ಸಾಹದಿಂದ ಹೇಳಿದ.

"ಇನ್ನೂ ಸ್ವಲ್ಪ ದೂರ ಹೋಗಬಹುದಾಗಿತ್ತಲ್ಲ?"

"ಹೌದು ಮೇಡಂ. ನಾನು ಹಾಗೇ ಮಾಡಬೇಕೆಂದಿದ್ದೆ. ನಾಳೆ ಬೆಳಿಗ್ಗೆ ಬೇಗ ಎದ್ದು ಬಿಡುತ್ತೇನೆ. ನೀವೇನಾದರೂ ಬೇಗ ಎದ್ದರೆ ಒಂದು ಕೂಗು ಹಾಕಿ. ನಾನು ಒಂದೈವತ್ತು ಲೀ ಅಷ್ಟು ದೂರಾನಾದರೂ ಹೋಗಿ ಮೊಲಗಳೋ ಅಥವಾ ಗಂಡು ಜಿಂಕೆಗಳೋ ಏನಾದರೂ ಸಿಗಬಹುದಾ ನೋಡ್ತೀನಿ. ಅದು ಅಷ್ಟು ಸುಲಭ ಏನೂ ಅಲ್ಲ. ಆದರೂ... ನಾನೊಂದು ದೊಡ್ಡ ಹೆಬ್ಬಾವು, ದೊಡ್ಡ ಹಂದಿ ಬೇಟೆಯಾಡಿದ್ದು ನೆನಪು ಇದೆಯೇನು?

ಕಪ್ಪುಕರಡಿಗಳು ನಿಮ್ಮಮ್ಮನ ಮನೆಯ ಮುಂದೆ ಹಾದು ಹೋಗುತ್ತಿದ್ದವು. ಅವುಗಳನ್ನು ಹೊಡಿ ಅಂತ ಎಷ್ಟೋ ಸಲ ನನಗೆ ಹೇಳಿದ್ದುಂಟು."

"ನಿಜವಾಗ್ಲೂ?" ಅದನ್ನೆಲ್ಲ ಚಾಂಗೋ ಮರೆತಿದ್ದ ಹಾಗಿತ್ತು.

"ಯಾರಿಗೆ ಗೊತ್ತಿತ್ತು. ಅವೆಲ್ಲ ಹೀಗೆ ಕಣ್ಮರೆಯಾಗಿ ಬಿಡುತ್ತವೆಂದು? ಯೋಚನೆ ಮಾಡಿದರೆ, ಇನ್ನು ಮುಂದೆ ಹೇಗಪ್ಪಾ ಅನಿಸುತ್ತೆ. ನನಗೇನೂ ಪರವಾಗಿಲ್ಲ. ಪೂಜಾರಿ ಕೊಟ್ಟ ಆ ಸಿದ್ಧರಸ ಕುಡಿದು ಬಿಟ್ಟರೆ ಸಾಕು, ಸ್ವರ್ಗಕ್ಕೆ ಹಾರಿ ಬಿಡುತ್ತೇನೆ. ಆದರೆ ಮೊದಲು ನಿನ್ನ ಬಗ್ಗೆ ಚಿಂತೆ ಮಾಡಬೇಕಲ್ಲ... ಅದಕ್ಕೇ ನಾಳೆ ಇನ್ನಷ್ಟು ದೂರ ಹೋಗೋಣಾಂತ ಇದ್ದೀನಿ."

"ಉಂ!"

ಚಾಂಗೋ ನೀರು ಕುಡಿದಾಗಿತ್ತು. ಮೆಲ್ಲಗೆ ಹಾಗೇ ಒರಗಿ ಕಣ್ಣುಮುಚ್ಚಿದಳು.

ಸಣ್ಣಗೆ ಉರಿಯುತ್ತಿದ್ದ ದೀಪದ ಬೆಳಕು, ಬಾಡಿದ ಮುಖದ ಮೇಲೆ ಬಿತ್ತು. ಹಚ್ಚಿಕೊಂಡಿದ್ದ ಪೌಡರ್ ಕರಗಿಹೋಗಿತ್ತು. ಅವಳ ಕಣ್ಣುಗಳ ಕೆಳಗೆ ಕಪ್ಪು ಉಂಗುರಗಳಿದ್ದವು. ಅವಳ ಒಂದು ಹುಬ್ಬು ಮತ್ತೊಂದಕ್ಕಿಂತ ದಪ್ಪಗಾಗಿತ್ತು. ಆದರೂ ಅವಳ ತುಟಿ ಬೆಂಕಿಯಷ್ಟು ಕೆಂಪಾಗಿತ್ತು. ಅವಳು ನಗುತ್ತಿರಲಿಲ್ಲವಾದರೂ ಗುಳಿಬಿದ್ದ ಕೆನ್ನೆಗಳನ್ನು ಸೂಕ್ಷ್ಮವಾಗಿ ಕಾಣಬಹುದಾಗಿತ್ತು.

"ಆಹಾ! ಇಲ್ಲ! ಇಂತಹ ಹೆಣ್ಣಿಗೆ ಕೇವಲ ನೂಡಲ್ಸ್ ಮತ್ತು ಕಾಗೆ ಸಾಸ್‌ನಿಂದ ಊಟ ಮಾಡಿಸುವುದು ಸರಿಯೇ!"

ಅವನಿಗೆ ನಾಚಿಕೆ ಎನಿಸಿ ಕೆಂಪಾದ ಯೀ.

I

ರಾತ್ರಿ ಕಳೆದು ಬೆಳಗಾಯಿತು. ಒಂದು ಕ್ಷಣದಲ್ಲಿ ಯೀ ಕಣ್ಣು ಬಿಟ್ಟ. ಪಶ್ಚಿಮ ಗೋಡೆ ಮೇಲೆ ವಾಲಿದ ಕಿರಣ ಹೊತ್ತಾಗಿರುವುದನ್ನು ಸೂಚಿಸಿತು. ಚಾಂಗೋಳ ಕಡೆ ನೋಡಿದ. ದೀರ್ಘ ನಿದ್ದೆಯಲ್ಲಿದ್ದಳು. ಸದ್ದಿಲ್ಲದೆ ಚಿರತೆ ಚರ್ಮ ಹೊದಿಸಿದ. ಸೋಫಾದಿಂದ ಇಳಿದು ಬಟ್ಟೆ ಧರಿಸಿದ. ಹೊರಗೆ ಹಜಾರಕ್ಕೆ ಬಂದ. ಮುಖ ತೊಳೆಯುತ್ತಿದ್ದಂತೆ ನೂಕೆಂಗ್‌ಗೆ ಕುದುರೆ ಸಿದ್ಧ ಮಾಡಲು ಹೇಳಿದ.

ಇಷ್ಟೆಲ್ಲ ಮಾಡಬೇಕಾಗಿದ್ದರಿಂದ ಈ ನಡುವೆ ತಿಂಡಿ ತಿನ್ನುವುದನ್ನೇ ಬಿಟ್ಟು ಬಿಟ್ಟಿದ್ದ. ನೂ-ಯಿ ಬೇಯಿಸಿದ ಐದು ರೊಟ್ಟಿ, ಐದು ಈರುಳ್ಳಿ ದಂಟು ಮತ್ತು ಪಾಪ್ರಿಕಾ ದ ಒಂದು ಪೊಟ್ಟಣವನ್ನು ತನ್ನ ಬೇಟೆ ಚೀಲದಲ್ಲಿ ಇರಿಸಿ ಅದನ್ನು ತನ್ನ ಸೊಂಟಕ್ಕೆ ಗಟಿಯಾಗಿ ಸಿಕ್ಕಿಸಿದ. ಜೊತೆಗೆ ಬಿಲ್ಲು ಬಾಣಗಳನ್ನೂ ಸಿಕ್ಕಿಸಿಕೊಂಡ. ತನ್ನ ಬೆಲ್ಟನ್ನು ಬಿಗಿಗೊಳಿಸಿ ಸದ್ದಿಲ್ಲದಂತೆ ಹಜಾರದಿಂದ ಹೊರಗೆ ಹೊರಡುತ್ತ, ಎದುರಾಗಿ ಬಂದ ನೂಕೆಂಗ್‌ಗೆ ಹೇಳಿದ, "ನಾನು ಇವತ್ತು ಬೇಟೆ ಹುಡುಕಿ ಇನ್ನಷ್ಟು ದೂರ ಹೋಗಬೇಕೆಂದಿದ್ದೇನೆ. ಬರುವುದಕ್ಕೆ ಹೊತ್ತಾಗಬಹುದು. ನಿನ್ನ ಯಜಮಾನಿ ಬೆಳಿಗ್ಗೆ ತಿಂಡಿ ಮುಗಿಸಿದ ಮೇಲೆ ಗೆಲುವಾಗಿರುವಾಗ ನೋಡಿಕೊಂಡು ನಾನು ಕ್ಷಮೆ ಕೇಳಿದೆ ಅಂತ ಹೇಳು. ಹಾಗೇನೇ ರಾತ್ರಿ ಊಟಕ್ಕೆ ನನಗಾಗಿ ಕಾಯಲು ಹೇಳು. ನಾನು ಕ್ಷಮೆ ಕೇಳಿದ್ದನ್ನು ಹೇಳೋದು ಮರೆಯಬೇಡ!"

ವೇಗವಾಗಿ ಹೆಜ್ಜೆ ಹಾಕುತ್ತ ನಡೆದು ಕುದುರೆ ಬೆನ್ನಿನ ಮೇಲೆ ಜಿಗಿದು ಕುಳಿತು, ತನ್ನೆರಡೂ ಬದಿಯಲ್ಲಿ ಸಾಲಾಗಿ ನಿಂತಿದ್ದ ಸೇವಕರನ್ನು ಹಾದು ಮಿಂಚಿನ ವೇಗದಲ್ಲಿ ಊರನ್ನು ದಾಟಿದ. ದಿನ ನಿತ್ಯ ಹಾದು ಹೋಗುತ್ತಿದ್ದ ಕಾವೊಲಿಂಗ್ ಗದ್ದೆಗಳು ಕಾಣಿಸಿದವು. ಅಲ್ಲಿ ಏನೂ ಬೆಳೆಯದೆ ನಿರುಪಯುಕ್ತವಾಗಿದ್ದುದನ್ನು ತಿಳಿದಿದ್ದ ಕಾರಣ ಅವನು ಆ ಕಡೆ ಲಕ್ಷ್ಯ ಕೊಡಲಿಲ್ಲ. ಒಂದೆರಡು ಬಾರಿ ಚಾಟಿ ಚುರುಕು ಮುಟ್ಟಿಸಿ ಒಂದೇ ಸಮನೆ ಸವಾರಿ ಮಾಡುತ್ತ ಅರವತ್ತು 'ಲೀ'ಗಳಷ್ಟು ದೂರ ಬಂದು ಬಿಟ್ಟ. ಮುಂದೆ ದಟ್ಟವಾದ ಕಾಡಿತ್ತು. ಅವನ ಕುದುರೆ ದಣಿದು ಏದುಸಿರು ಬಿಡುತ್ತಿದ್ದುದರಿಂದ ಸ್ವಲ್ಪ ನಿಧಾನಿಸಿದ. ಇನ್ನೊಂದು ಹತ್ತು ಲೀ ದೂರ ಸಾಗಿ ಕಾಡಿನೊಳಗೆ ಪ್ರವೇಶಿಸಿದ. ಆದರೆ ಅಲ್ಲಿ ಅವನಿಗೆ ಕಂಡದ್ದು ಮಿಡತೆ, ಕಣಜ ಮತ್ತು ಚಿಟ್ಟೆಗಳು ಮಾತ್ರ. ಒಂದು ಹಕ್ಕಿಯ ಸುಳಿವಾಗಲೀ ಪ್ರಾಣಿಯ ಸುಳಿವಾಗಲೀ ಸಿಗಲಿಲ್ಲ. ತಾನೆಂದೂ ಬಾರದಿದ್ದ ಪ್ರದೇಶಕ್ಕೆ ಬಹಳ ಆಸೆಗಳನ್ನಿಟ್ಟುಕೊಂಡು ಬಂದಿದ್ದ. ಒಂದೆರಡು ನರಿಗಳೋ, ಮೊಲಗಳೋ ಸಿಗಬಹುದೆಂದು ಎಣಿಸಿದ್ದ. ಆದರೆ ಈಗ ಅದೆಲ್ಲವೂ ವ್ಯರ್ಥ ಕನಸುಗಳು ಎನಿಸಿದವು. ಇನ್ನೂ ಸ್ವಲ್ಪ ದೂರ ನಡೆದು, ಇನ್ನೊಂದು ಕಡೆ ಕಾವೋಲಿಂಗ್ ಗದ್ದೆಗಳನ್ನು ನೋಡಿದ. ಅದರ ನಡುವೆ ದೂರದಲ್ಲಿ ಒಂದೆರಡು ಮಣ್ಣಿನ ಗುಡಿಸಲು ಕಾಣಿಸಿದವು. ಗಾಳಿ ಆಹ್ಲಾದಕರವಾಗಿತ್ತು. ಸೂರ್ಯ ಸ್ವಲ್ಪ ಬೆಚ್ಚಗಿದ್ದ. ಕಾಗೆಯಾಗಲೀ, ಗುಬ್ಬಚ್ಚಿಯಾಗಲಿ ಕೂಗಿದ ಸದ್ದು ಕೇಳಿಸಲಿಲ್ಲ.

"ಹಾಳಾಗಿ ಹೋಗಲಿ." ಮನಸ್ಸನ್ನು ಹಗುರಗೊಳಿಸಿಕೊಳ್ಳಲು ಗೊಣಗಿಕೊಂಡ.

ಒಂದು ಹತ್ತೆಂಟು ಹೆಜ್ಜೆ ಮುಂದೆ ಹೋದದ್ದೇ, ಸಂತೋಷದಿಂದ ಅವನ ಮನಸ್ಸು ಕೆನೆಯಿತು. ಸಮತಲ ನೆಲದ ಮೇಲೆ ದೂರದಲ್ಲಿದ್ದ ಆ ಮಣ್ಣಿನ ಗುಡಿಸಲು. ಮುಂದೆ ಒಂದು ಕೋಳಿಯನ್ನು ನೋಡಿದ. ಒಂದೊಂದು ಹೆಜ್ಜೆಗೂ ಅದು ನಿಂತು ಕುಕ್ಕಿ ಆಯ್ದು ಕೊಳ್ಳುತ್ತಿದ್ದುದನ್ನು ನೋಡಿದರೆ ದೊಡ್ಡ ಪಾರಿವಾಳದಂತೆ ಕಾಣಿಸುತ್ತಿತ್ತು. ಬಿಲ್ಲನ್ನು ತೆಗೆದು ಬಾಣ ಹೂಡಿ ಹಗ್ಗ ಎಳೆದು ಬಿಟ್ಟಿದ್ದೇ ಬಾಣ ಉಲ್ಕಾಪಾತದಂತೆ ಬಿಲ್ಲಿನಿಂದ ಹೊರಟಿತು. ತನ್ನ ಬಾಣ ಎಂದೂ ಗುರಿ ತಪ್ಪಿದ್ದಿಲ್ಲವೆಂಬ ಖಾತರಿಯಿಂದ ಬಾಣ ಬಿಟ್ಟ ದಿಕ್ಕಿಗೆ ವೇಗವಾಗಿ ಹೆಜ್ಜೆಹಾಕಿ ತನ್ನ ಬೇಟೆಯನ್ನು ತೆಗೆದುಕೊಂಡು ಬರಬೇಕೆಂದು ಹೊರಟ. ಅವನು ಆ ಜಾಗ ತಲುಪಿದ್ದೇ ವಯಸ್ಸಾದ ಹೆಂಗಸೊಬ್ಬಳು ತಾನಿದ್ದ ಕುದುರೆಯ ಕಡೆಗೆ ಬರತೊಡಗಿದಳು. ಅವನು ಹೊಡೆದು ಬೀಳಿಸಿದ್ದ ದೊಡ್ಡ ಪರಿವಾಳವನ್ನು ಎತ್ತಿಕೊಂಡು ಗದರಿಸಿ ಕೇಳಿದಳು, "ಯಾರೋ ನೀನು? ಯಾಕೋ ನನ್ನ ಮೊಟ್ಟೆ ಇಡುವ ಕೋಳಿಯನ್ನು ಕೊಂದೆ? ನಿನಗೆ ಮಾಡೋಕೆ ಕೆಲಸ ಇಲ್ವ?"

ಯೀ ಎದೆ ಬಡಿತ ನಿಂತಿತು. ಸ್ವಲ್ಪ ಚೇತರಿಸಿಕೊಂಡು, "ಏನು ಅದು ಕೋಳೀನಾ? " ಭಯದಿಂದ ಕೇಳಿದ. "ನಾನು ಅದನ್ನು ಯಾವುದೋ ಕಾಡು ಪಾರಿವಾಳ ಎಂದುಕೊಂಡಿದ್ದೆ"

"ನಿಂಗೆ ಕಣ್ಣು ಕಾಣಿಸೋದಿಲ್ವೇನು? ನಲವತ್ತೆರಡಕ್ಕೂ ಮೀರಿದ ವಯಸ್ಸಾಗಿರಬೇಕಲ್ಲ?"

ಹೌದು ಮೇಡಂ. ಹೋದ ವರ್ಷ ನಲವತ್ತೈದಕ್ಕೆ ಬಂತು. "ಮುದಿ ಮೂರ್ಖನಿಗಿಂತ ಬೇರೆ ಮೂರ್ಖ ಇರಲಾರ. ಕೋಳೀನ ಕಾಡು ಪಾರಿವಾಳ ಅಂದ್ಕೊಂಡ್ರೆ, ಏನಂತ ತಿಳ್ಕೋಬೇಕು? ಇಷ್ಟಕ್ಕೂ ನೀನು ಯಾರು?

"ನಾನು ಯೀ" ಇದನ್ನು ಹೇಳುತ್ತಾ ಗಮನಿಸಿದ ತನ್ನ ಬಾಣ ನೇರವಾಗಿ ಕೋಳಿಯ ಎದೆ ಇರಿದು, ಕೂಡಲೇ ಸಾಯಿಸಿದೆ. ಕುದುರೆ ಇಳಿದು ಹೇಳುತ್ತಿದ್ದಂತೆ ಅವನ ಧ್ವನಿ ಕ್ಷೀಣವಾಯಿತು.

"ಯೀ! ಆ ಹೆಸರನ್ನು ಎಂದೂ ಕೇಳಿಯೇ ಇಲ್ಲ!" ಅವನ ಮುಖವನ್ನು ಸೂಕ್ಷ್ಮವಾಗಿ ಗಮನಿಸಿದಳು.

"ನನ್ನ ಹೆಸರು ತಿಳಿದವರಿದ್ದಾರೆ. ಅದರಲ್ಲೂ ಸಜ್ಜನ ದೊರೆ ಯೋ ನ ಕಾಲದಲ್ಲಿ ನಾನು ಕಾಡು ಹಂದಿ, ಹಾವುಗಳನ್ನು ಬೇಟೆಯಾಡುತ್ತಿದ್ದೆ."

"ಲೋ ಸುಳ್ಳುಗಾರ! ಹಂದಿಗಳನ್ನು, ಹಾವುಗಳನ್ನು ಬೇಟೆಯಾಡುತ್ತಿದ್ದವರು ಫೆಂಗ್‌ಮೆಂಗ್ ಮತ್ತು ಇತರರು. ಬಹುಶಃ ಅವರಿಗೆ ನೀನು ಸಹಾಯ ಮಾಡಿರಬಹುದು. ಅದಕ್ಕೇಂತ ಎಲ್ಲಾ ನೀನೇ ಮಾಡಿದ್ದೂಂತ ಹೊಗಳಿಕೊಳ್ಳೋದು ಸರೀನಾ? ನಾಚಿಕೆಗೇಡು....."

"ಯಾಕೆ ಮೇಡಂ, ಆ ಫೆಂಗ್‌ಮೆಂಗ್, ಕಳೆದ ಕೆಲವು ವರ್ಷಗಳಿಂದ ನನ್ನಲ್ಲಿಗೇ ಬಂದು ಕಲಿಯಲು ಶುರುಮಾಡಿದ್ದ. ನಾವಿಬ್ಬರೂ ಒಟ್ಟಿಗೆ ಎಂದೂ ಕೆಲಸ ಮಾಡಲಿಲ್ಲ. ಅವನೆಂದೂ ನನ್ನ ಜೊತೆ ಭಾಗವಹಿಸಲಿಲ್ಲ.

"ಸುಳ್ಳುಗಾರ! ಎಲ್ಲರೂ ಹಾಗೇಂತಲೇ ಹೇಳ್ತಾರೆ. ತಿಂಗಳಿಗೆ ನಾಲ್ಕೈದು ಸಲವಾದರೂ ಹಾಗಂತ ಹೇಳ್ತಾರೆ."

"ಸರಿ ಬಿಡು. ಈಗ ನೇರವಾಗಿ ಮಾತಿಗೆ ಬರೋಣ. ಈಗ ಈ ಕೋಳಿ ವಿಷಯ ಏನು?"

"ಅದಕ್ಕೆ ಪರಿಹಾರ ಕೊಡಬೇಕು. ಅದು ನನಗೆ ತೀರಾ ಬೇಕಾದ್ದು. ಪ್ರತಿದಿನಾ ನನಗೆ ಒಂದೊಂದು ಮೊಟ್ಟೆ ಕೊಡ್ತಿತ್ತು. ಅದಕ್ಕಾಗಿ, ಅದರ ಬದಲಿಗೆ ಎರಡು ಗುದ್ದಲಿ ಮತ್ತು ಮೂರು ಕದಿರಣಿಗೆ (spindle) ಕೊಡಬೇಕು."

"ನೋಡಿ ಮೇಡಂ. ನಾನು ನೆಲ ಊಳೋದೂ ಇಲ್ಲ. ನೂಲು ತೆಗೆಯೋದೂ ಇಲ್ಲ. ಆದ್ದರಿಂದ ಗುದ್ದಲಿಗಳನ್ನು ಕದಿರಣಿಗೆಗಳನ್ನು ಎಲ್ಲಿಂದ ತರಲಿ? ಈಗ ನನ್ನ ಹತ್ತಿರ ಹಣವೂ ಇಲ್ಲ. ಬೇಯಿಸಿದ ಐದು, ಬಿಳಿ ಹಿಟ್ಟಿಂದ ಮಾಡಿದ ರೊಟ್ಟಿಗಳಿವೆ. ಕೋಳೀಗೆ ಬದಲಾಗಿ ರೊಟ್ಟಿಗಳನ್ನು ಈರುಳ್ಳಿ ದಂಟುಗಳನ್ನು ಪಾಪ್ರಿರಾ ಪೊಟ್ಟಣವನ್ನೂ ಕೊಡ್ತೇನೆ. ಏನು ಹೇಳ್ತಿ?"

ಒಂದು ಕೈಯಿಂದ ಚೀಲದೊಳಗಿನ ರೊಟ್ಟಿಗಳನ್ನು ತೆಗೆಯುತ್ತ, ಮತ್ತೊಂದು ಕೈಯಲ್ಲಿ ಕೋಳಿ ಹಿಡಿದ.

ಬಿಳಿ ಹಿಟ್ಟಿನಿಂದ ಮಾಡಿದ ರೊಟ್ಟಿಗಳನ್ನು ತೆಗೆದುಕೊಳ್ಳಲು ಮುದುಕಿಗೆ ಅಭ್ಯಂತರವಿರಲಿಲ್ಲ. ಆದರೆ ಹದಿನೈದು ರೊಟ್ಟಿ ಬೇಕೆಂದು ಹಠ ಹಿಡಿದಳು. ಕಡೆಗೆ ಚೌಕಾಶಿ ಮಾಡಿ ಹತ್ತಕ್ಕೆ ಒಪ್ಪಿಸಲಾಯಿತು. ಯೀ ಹೆಚ್ಚೆಂದರೆ ನಾಳೆ ಮಧ್ಯಾಹ್ನದ ಒಳಗೆ ಉಳಿದವುಗಳನ್ನು ತಂದುಕೊಡುವುದಾಗಿ ಭರವಸೆ ಕೊಟ್ಟ. ತನ್ನ ಬಾಣವನ್ನು

ನಂಬಿಕೆಗಾಗಿ ಅವಳಲ್ಲಿಯೇ ಇರಿಸಿದ. ಈಗ ಅವನಿಗೆ ಸಮಾಧಾನವಾಗಿತ್ತು. ಸತ್ತ ಕೋಳಿಯನ್ನು ಚೀಲದೊಳಕ್ಕೆ ತುರುಕಿದ. ಕುದುರೆ ಬೆನ್ನೇರಿ ಕುಳಿತು ಮನೆ ಕಡೆ ದೌಡಾಯಿಸಿದ. ಹಸಿದು ಕಂಗಾಲಗಿದ್ದರೂ ಸಂತೋಷವಾಗಿದ್ದ. ಕೋಳಿ ಸಾರು ತಿಂದು ಒಂದು ವರ್ಷಕ್ಕೂ ಹೆಚ್ಚಾಗಿತ್ತು. ಕಾಡಿಂದ ಹೊರಗೆ ಬಂದಾಗ ಮಧ್ಯಾಹ್ನವಾಗಿತ್ತು. ಮನೆಗೆ ಬೇಗ ಸೇರಬೇಕೆಂಬ ತವಕದಲ್ಲಿ ಒಂದೆರಡು ಚಾಟಿ ಏಟು ಬಿಟ್ಟ. ಅವನ ಕುದುರೆ ಸಾಕಷ್ಟು ದಣಿದಿತ್ತು. ಹೀಗಾಗಿ ಮುಸ್ಸಂಜೆಯಾಗುವವರೆಗೂ ಕಾವೋಲಿಂಗ್ ಗದ್ದೆಗಳನ್ನು ತಲುಪಲು ಸಾಧ್ಯವಾಗಲಿಲ್ಲ. ಸ್ವಲ್ಪ ದೂರದಲ್ಲಿ ಮನುಷ್ಯಾಕೃತಿಯ ನೆರಳು ಕಾಣಿಸಿತು. ಒಂದೇ ಸಲಕ್ಕೆ ಬಾಣವೊಂದು ಅವನೆಡೆಗೆ ಗಾಳಿಯಲ್ಲಿ ಹಾದು ಬಂತು.

ಹೆಜ್ಜೆ ಹಾಕುತ್ತಿದ್ದ ಕುದುರೆಗೆ ಕಡಿವಾಣ ಹಾಕದೆ, ಯೀ ತನ್ನ ಬಿಲ್ಲಿಗೆ ಬಾಣವೇರಿಸಿ ಬಿಟ್ಟ. "ಝುಂಗ್" - ಸದ್ದಿನೊಡನೆ ಎರಡೂ ಬಾಣಗಳೂ ಡಿಕ್ಕಿ ಹೊಡೆದು ಕಿಡಿಗಳು ಹಾರಿದವು. ಎರಡೂ ಕಡೆಯಿಂದ ಹೂಡಿದ ಬಾಣಗಳು ತಲೆಕೆಳಗಾದ V ಅಕ್ಷರದಂತೆ ಪರಸ್ಪರ ಸಿಡಿದು ನೆಲಕ್ಕುರುಳುವ ಮೊದಲು ಕಾಣಿಸಿತು. ಎರಡೂ ಕಡೆಗಳಿಂದ ಬಾಣ ಪ್ರಯೋಗ ನಡೆದು ಬಾಣಗಳು ಡಿಕ್ಕಿ ಹೊಡೆದು ಕೆಳಗುರುಳುತ್ತಿದ್ದವು. ಇದೇ ರೀತಿ ಒಂಬತ್ತು ಸಲ ನಡೆಯಿತು. ಯೀ ನ ಬತ್ತಳಿಕೆ ಖಾಲಿಯಾಗಿತ್ತು. ಈಗ ತನ್ನೆದುರು ಫೆಂಗ್‌ವೆಂಗ್ ನಿಂತು ತನ್ನ ಕುತ್ತಿಗೆಗೆ ಗುರಿಯಿಟ್ಟು ಹೆಮ್ಮೆಯಿಂದ ಬೀಗುತ್ತಿದ್ದುದನ್ನು ನೋಡಿದ.

"ಓಹೋ, ಹೀಗೋ" ಯೀ ಯೋಚಿಸಿದ. ಇಲ್ಲೇ ಸಮುದ್ರ ತೀರದಲ್ಲಿ ಅಲೆದಾಡುತ್ತ ಮೀನು ಹಿಡಿಯುತ್ತಿದ್ದು, ಈಗ ಇಂಥ ದರಿದ್ರ ಕೆಲಸ ಮಾಡಲು ಹೊರಟಿರಬೇಕು. ಆ ಮುದುಕಿ ಆಗ ಮಾತಾಡಿದ್ದು ಈಗ ಅರ್ಥ ಆಗ್ತಿದೆ...."

ಮಿಂಚಿನಂತೆ, ಚಂದ್ರನ ಆಕಾರದಲ್ಲಿದ್ದ ಬಿಲ್ಲಿನಿಂದ ಹೊರಟ ಬಾಣ ಯೀನ ಕುತ್ತಿಗೆಯೆಡೆಗೆ ಬರುತ್ತಿತ್ತು. ಗುರಿ ತಪ್ಪಿ, ಬಾಣ ಯೀನ ಬಾಯಿಯೆಡೆಗೆ ಬಂದು ತಗುಲಿತು. ಯೀ ಎಡವಿ ದಿಗ್ಭ್ರಾಂತನಾಗಿ ನಿಂತವನು, ನೆಲಕ್ಕುರುಳಿದ. ಅವನ ಕುದುರೆ ನಿಶ್ಚಲವಾಗಿ ನಿಂತಿತು.

ಯೀ ಸತ್ತಿರಬೇಕೆಂದು ಭಾವಿಸಿದ ಫೆಂಗ್‌ಮೆಂಗ್ ಮೆಲ್ಲನೆ ಅಲ್ಲಿಂದ ಜಾರಿದ. ತನ್ನ ಗೆಲುವಿಗೆ ಗರ್ವ ಪಡುತ್ತ, ಹೆಣದತ್ತ ಮುಗುಳ್ನಗುತ್ತ ನೋಡಿದ.

ಅವನು ದಿಟ್ಟಿಸುತ್ತ ನಿಂತಿರುವಾಗ ಯೀ ಕಣ್ಣು ಬಿಟ್ಟು ಎದ್ದು ಕುಳಿತ.

"ನೂರು ಸಲ ನನ್ನ ಹತ್ತಿರ ಬಂದಿದ್ದರೂ ನೀನಿನ್ನೂ ಏನನ್ನೂ ಕಲಿತಿಲ್ಲ." ಬಾಣವನ್ನು ಹೊರಕ್ಕೆ ಉಗುಳಿ ನಕ್ಕ. "ಬಾಣವನ್ನು ಅಗಿಯುವ ನನ್ನ ಕಲೆಯ ಪರಿಚಯ ನಿನಗಿಲ್ಲವೇನು? ಛೆ! ಛೆ!.... ಬಹಳ ಕೆಟ್ಟದಾಯ್ತು! ನಿನ್ನ ಈ ತಂತ್ರಗಳಿಂದ ನನಗೇನೂ ಪ್ರಯೋಜನವಿಲ್ಲ. ಕಲಿತ ಬಾಕ್ಸಿಂಗ್‌ನಿಂದ ಬಾಕ್ಸಿಂಗ್ ಕಲಿಸಿದ ಗುರುವನ್ನು ಕೊಲ್ಲುವುದಕ್ಕೆ ಆಗೊಲ್ಲ. ನಿನ್ನದೇ ಸ್ವತಂತ್ರ ರೀತಿಯನ್ನು ಕಲೀಬೇಕು."

"ನಿನ್ನಿಂದ ಕಲಿತ ಪಾಠದಿಂದಲೇ ನಿನಗೆ ಪಾಠ ಕಲಿಸಬೇಕೆಂದಿದ್ದೆ" ಗೊಣಗುಟ್ಟಿದ, ವಿಜಯಿಯಾಗಿದ್ದ ಫೆಂಗ್‌ಮೆಂಗ್!

ತೃಪ್ತಿಯಾಗುವಷ್ಟು ನಗುತ್ತ ಎದ್ದು ನಿಂತ. "ಯಾವಾಗಲೂ ಏನಾದರೂ ಹೇಳಿ, ಕೇಳುವವರನ್ನು ಬೇಸ್ತು ಬೀಳಿಸಬೇಕೆಂದುಕೊಳ್ಳುತ್ತೀಯ. ಆ ಮುದುಕಿ ಅಂತಹವರನ್ನು ಮರುಳು ಮಾಡಬಹುದೇ ಹೊರತು, ನನ್ನಂಥವರನ್ನಲ್ಲ. ಯಾವಾಗಲೂ ಬೇಟೆಯಾಡಿದ್ದೇನೆಯೇ ಹೊರತಾಗಿ, ನಿನ್ನ ಹಾಗೆ ದಾರಿಗಳ್ಳನಾಗಲಿಲ್ಲ..."

ಚೀಲದಲ್ಲಿದ್ದ ಕೋಳಿ ನಜ್ಜುಗುಜ್ಜಾಗದೆ ಇದ್ದುದನ್ನು ನೋಡಿ ಸಮಾಧಾನ ಪಟ್ಟುಕೊಂಡ. ಕುದುರೆ ಹತ್ತಿ ದೌಡಾಯಿಸಿದ.

"ಹಾಳಾಗಿ ಹೋಗು"... ಶಾಪವೊಂದು ಹಿಂಬಾಲಿಸಿತು.

"ಅವನು ಇಷ್ಟು ಹಾಳಾಗಿ ಹೋಗಬೇಕಾ? ಇಷ್ಟು ಚಿಕ್ಕವನು. ಹೀಗೆ ಶಾಪ ಗೀಪ ಹಾಕೋದು ನೋಡು. ಆ ಮುದುಕಿ ಅವನನ್ನು ನಂಬಿದ್ದು ಆಶ್ಚರ್ಯವೇನಲ್ಲ." ದುಃಖದಿಂದ ತಲೆಯಾಡಿಸುತ್ತಾ ಮುಂದೆ ಸಾಗಿದ.

## III

ಕಾವೋಲಿಯಾಂಗ್ ಗದ್ದೆಗಳ ಕೊನೆಗೆ ಬರುವಷ್ಟು ಹೊತ್ತಿಗೆ ರಾತ್ರಿಯಾಗಿತ್ತು. ದಟ್ಟ ನೀಲಿ ಆಕಾಶದಲ್ಲಿ ನಕ್ಷತ್ರಗಳು ಕಾಣಿಸಿಕೊಂಡವು. ಪಶ್ಚಿಮ ದಿಕ್ಕಿನಲ್ಲಿ ಸಂಜೆ ನಕ್ಷತ್ರಗಳು ಕಾಣಿಸಿಕೊಂಡವು. ಪಶ್ಚಿಮ ದಿಕ್ಕಿನಲ್ಲಿ ಸಂಜೆ ನಕ್ಷತ್ರ ಅಪರೂಪ ಕಾಂತಿಯಿಂದ ಹೊಳೆಯುತ್ತಿತ್ತು. ಕುದುರೆ ಕಾವೋಲಿಂಗ್ ಗದ್ದೆಗಳ ನಡುವಿನ ಹಾದಿ ಹಿಡಿದು ಹೆಜ್ಜೆ ಹಾಕುತ್ತಿತ್ತು. ಅದು ಬಹಳ ದಣಿದಿದ್ದರಿಂದ ಎಂದಿಗಿಂತ ನಿಧಾನವಾಗಿ ಮುಂದೆ ಸಾಗುತ್ತಿತ್ತು. ಅದೃಷ್ಟವಶಾತ್ ಆಕಾಶದಲ್ಲಿ ಚಂದ್ರ ಬೆಳ್ಳಿ ಬೆಳಕನ್ನು ಚೆಲ್ಲುತ್ತಿತ್ತು.

"ಹಾಳಾಗಿ ಹೋಗಲಿ!" ಯೀ ನ ಹೊಟ್ಟೆಯಲ್ಲಿ ಗುಳು ಗುಳು ಆರಂಭವಾಯಿತು.

ಸಹನೆ ಕಳೆದುಕೊಂಡ. ಎಷ್ಟು ಕಷ್ಟಪಟ್ಟು ಜೀವನ ನಡೆಸುವುದಕ್ಕೆ ಪ್ರಯತ್ನಿಸಿದರೆ, ಅಷ್ಟೂ ಕಷ್ಟವೇ ಹೆಚ್ಚಾಗುತ್ತಿದೆ. ಆಗಬಾರದ್ದೆಲ್ಲ ಆಗಿ ಸುಮ್ಮನೆ ವ್ಯರ್ಥವಾಗುತ್ತಿದೆ." ಮತ್ತೊಮ್ಮೆ ಕುದುರೆಗೆ ಚುರುಕು ಮುಟ್ಟಿಸಿದ. ಕುದುರೆ ಸುಮ್ಮನೆ ತಿರುಗಿ ನೋಡಿ, ಮೊದಲಿನಷ್ಟೇ ನಿಧಾನವಾಗಿ ಸಾಗಿತು.

"ತುಂಬಾ ಹೊತ್ತಾಗಿದೆ. ಚಾಂಗೋ ಖಂಡಿತ ಕೋಪ ಮಾಡಿಕೊಂಡು ಇರ್ತಾಳೆ ಎಂದು ಯೋಚಿಸಿದ. ಸಿಟ್ಟಿಂದ ಎಗರಿ ಬೀಳ್ತಾಳೆ. ಅಬ್ಬ ಸದ್ಯ ಈ ಕೋಳೀಯಾದರೂ ಇದೆಯಲ್ಲ ಸಮಾಧಾನ ಪಡಿಸೋಕೆ! ನಾನು ಹೇಳ್ತೇನೆ, "ಮೇಡಂ ನಾನು ನಿನಗಾಗಿ ಇದನ್ನು ತರೋಕೇಂತ ಇನ್ನೂರು ಲೀಗಳಷ್ಟು ದೂರ ಕ್ರಮಿಸಿದೆ...." ಬೇಡ ಯಾಕೋ ಚೆನ್ನಾಗಿಲ್ಲ. ತುಂಬ ಹೊಗಳಿಕೊಂಡ ಹಾಗೆ ಅನ್ನಿಸುತ್ತೆ.

ಮುಂದೆ ದೀಪಗಳು ಕಾಣಿಸಿದ್ದೇ ಅವನ ಚಿಂತೆ ದೂರವಾಗಿ ಸಂತೋಷವಾಯಿತು. ಯಾವುದೇ ಪ್ರಚೋದನೆ ಇಲ್ಲದೆ ಕುದುರೆ ನಾಗಾಲೋಟದಿಂದ ಸಾಗಿತು. ದುಂಡನೆಯ ಮಂಜು ಬಿಳುಪಿನ ಚಂದ್ರ ತನ್ನ ಮುಂದಿದ್ದ ದಾರಿಯನ್ನು ಬೆಳಗಿದ. ತಣ್ಣನೆಯ ಗಾಳಿ ಅವನ ಕೆನ್ನೆಗಳಿಗೆ ತಂಪು ನೀಡಿತು. ದೊಡ್ಡ ಬೇಟೆಯಿಂದ ಮನೆಗೆ ಹಿಂತಿರುಗುವುದಕ್ಕಿಂದ ಇದು ಹಿತವೆನಿಸಿತು."

ಕುದುರೆ ತನಗೆ ತಾನೇ ಕಸದ ರಾಶಿಯ ಪಕ್ಕದಲ್ಲಿ ನಿಂತುಕೊಂಡಿತು. ಯೀ ಒಮ್ಮೆ ಕಣ್ಣು ಹಾಯಿಸಿದ. ಏನೋ ವ್ಯತ್ಯಾಸವಾದಂತೆ ಕಾಣಿಸಿತು. ಇಡೀ ಮನೆ ಅಸ್ತವ್ಯಸ್ತವಾದಂತಿತ್ತು. ಚಾವೋ ಘೂ ಮಾತ್ರವೇ ಅವನನ್ನು ಸ್ವಾಗತಿಸಲು ಹೊರಗೆ ಬಂದ.

"ಏನಾಯ್ತು? ವ್ಯಾಂಗ್ ಷೆಂಗ್ ಎಲ್ಲಿ?" ಅವನು ಕೇಳಿದ.

"ಯಜಮಾನಿಯನ್ನು ಹುಡುಕಿಕೊಂಡು ಯಾವೋ ಮನೆಗೆ ಹೋಗಿದ್ದಾನೆ."

"ಏನು? ನಿನ್ನ ಯಜಮಾನಿ ಯಾವೋ ಮನೆಗೆ ಹೋಗಿದ್ದಾಳೆಯೇ? ಇಳಿಯಬೇಕೆನ್ನುವುದನ್ನೂ ಮರೆತು ದಿಗ್ಭ್ರಾಂತನಾಗಿದ್ದ.

"ಹೌದು ಸ್ವಾಮಿ" ಹೇಳುತ್ತಾ ಅವನಿಂದ ಜೇನು ಮತ್ತು ಚಾಟಿಯನ್ನು ತೆಗೆದುಕೊಂಡ.

ನಂತರ ಯೀ ಕುದುರೆಯಿಂದ ಇಳಿದು ಮನೆಯ ಹೊಸ್ತಿಲು ದಾಟಿದ ಮರುಕ್ಷಣ ಏನನ್ನೋ ಕೇಳಬೇಕೆಂದುಕೊಂಡು ತಿರುಗಿದ.

"ನನಗಾಗಿ ಕಾದು ಕಾದು ಬೇಸತ್ತು ಹೋಟೆಲ್‌ಗೆ ಹೋಗಿಲ್ಲ ಅಂತ ಖಾತ್ರಿ ಏನು?"

"ಖಂಡಿತ ಇಲ್ಲ. ನಾನು ಎಲ್ಲ ಹೋಟೆಲುಗಳಲ್ಲಿಯೂ ವಿಚಾರಿಸಿದೆ. ಇರಲಿಲ್ಲ."

ಯೋಚನೆಯಲ್ಲಿ ತಲೆ ತಗ್ಗಿಸಿದ. ಯೀ ಮನೆ ಒಳಗೆ ಹೋದ. ಮೂರು ಜನ ಕೆಲಸದ ಹೆಣ್ಣುಗಳು ಹೆದರಿಕೆಯಿಂದ ಹಜಾರದ ಮುಂದುಗಡೆ ನಿಂತಿದ್ದರು. ಅವನು ಆಶ್ಚರ್ಯದಿಂದ ಗಟ್ಟಿಯಾಗಿ ಅಬ್ಬರಿಸಿದ. "ಏನು ನೀವೆಲ್ಲ ಇಲ್ಲೇ ಇದ್ದೀರಾ? ನಿಮ್ಮ ಯಜಮಾನಿ ಒಬ್ಬಳೇ ಯಾವೋ ಮನೆಗೆ ಎಂದೂ ಹೋಗೋದಿಲ್ಲ."

ಅವರೆಲ್ಲ ಮೌನವಾಗಿ ಅವನತ್ತ ನೋಡಿದರು. ನಂತರ ಅವನಿಂದ ಬಿಲ್ಲು, ಬಾಣ, ಚೀಲಗಳನ್ನು ಕೋಳಿಯ ಸಹಿತವಾಗಿ ತೆಗೆದುಕೊಂಡರು. ಒಂದು ಕ್ಷಣ ಯೀಗೆ ಭಯವಾಯಿತು. ಒಂದು ವೇಳೆ ಚಾಂಗೋ ಏನಾದರೂ ಕೋಪದಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದರೆ? ನೂಕೆಂಗ್‌ನನ್ನು ಚಾವೋ ಘೂ ಬಳಿಗೆ ಕಳಿಸಿ ಹಿಂದೆ ಇದ್ದ ಕೊಳ ಮತ್ತು ಮರಗಳ ನಡುವೆ ಹುಡುಕಲು ಹೇಳಿದ. ಕೋಣೆ ಒಳಗೆ ಬಂದಾಗ, ಬಹುಶಃ ತನ್ನ ಊಹೆ ತಪ್ಪಿದ್ದರೂ ಇರಬಹುದೆನಿಸಿತು. ಕೊಠಡಿಯೆಲ್ಲ ಅಸ್ತವ್ಯಸ್ತವಾಗಿತ್ತು. ಡ್ರಾಯರ್‌ಗಳೆಲ್ಲ ತೆರೆದಿದ್ದವು. ಹಾಸಿಗೆ ಹಿಂದೆ ಒಮ್ಮೆ ಕಣ್ಣು ಹಾಯಿಸಿದಾಗ ಆಭರಣದ ಪೆಟ್ಟಿಗೆ ಮಾಯವಾಗಿರುವುದು ಕಾಣಿಸಿತು. ಕೊರೆವ ತಣ್ಣನೆಯ ನೀರಿನಲ್ಲಿ ಮುಳುಗಿದಂತೆನಿಸಿತು. ಚಿನ್ನ, ಮುತ್ತುಗಳು ಅವನಿಗೆ ಅಷ್ಟಾಗಿ ಬೇಕಾಗಿರಲಿಲ್ಲ. ಆದರೆ ಪೂಜಾರಿಯೊಬ್ಬ ಕೊಟ್ಟಿದ್ದ ಸಿದ್ಧರಸ ಅದೇ ಪೆಟ್ಟಿಗೆಯಲ್ಲಿತ್ತು.

ಒಂದೆರಡು ಸಲ ಆ ಕೋಣೆಯಲ್ಲಿ ಅತ್ತಿಂದಿತ್ತ ಓಡಾಡಿದ ಮೇಲೆ ಬಾಗಿಲಲ್ಲಿ ವ್ಯಾಂಗ್‌ಷೆಂಗ್ ನಿಂತಿರುವುದು ಕಾಣಿಸಿತು.

"ಸ್ವಾಮಿ, ಒಡತಿ ಯಾವೋರ ಮನೆಯಲ್ಲಿ ಇಲ್ಲ. ಅವರು ಈ ದಿನ ಮಾಹ್‌ಜೊಂಗ್ ಆಟ ಆಡುತ್ತಿಲ್ಲ."

ಯೀ ಅವನ ಕಡೆ ನೋಡಿ ಸುಮ್ಮನಾದ. ವ್ಯಾಂಗ್‌ಷೆಂಗ್ ಅಲ್ಲಿಂದ ಹೊರಟ.

"ನೀವು ನನ್ನನ್ನು ಕರೆದಿರಾ ಸ್ವಾಮಿ?" ಚಾವೋ ಫೂ ಒಳಗೆ ಬರುತ್ತಾ ಕೇಳಿದ.

ಯೀ, ಇಲ್ಲ ಎಂಬಂತೆ ತಲೆಯಾಡಿಸಿ, ಹೋಗಲು ಕೈಯಿಂದ ಸನ್ನೆ ಮಾಡಿದ.

ಕೋಣೆ ಒಳಗೆ ಓಡಾಡಿ ಓಡಾಡಿ ಕಡೆಗೆ ಹಜಾರಕ್ಕೆ ಬಂದು ಕುಳಿತುಕೊಂಡ. ತಲೆ ಎತ್ತಿ ಎದುರಿಗೆ ಗೋಡೆ ಮೇಲಿದ್ದ ಕುಂಕುಮ ಬಣ್ಣದ ಬಿಲ್ಲು ಬಾಣ, ಕಪ್ಪು ಬಿಲ್ಲು

ಬಾಣಗಳನ್ನು, ಡೊಂಕು ಡೊಂಕಾದ ಬಿಲ್ಲು ಬಾಣಗಳನ್ನು, ಕತ್ತಿ, ಬಾಕುಗಳನ್ನು ನೋಡಿದ. ಸ್ವಲ್ಪ ಯೋಚಿಸಿದ ನಂತರ ಸ್ತಬ್ಧರಾಗಿ, ನಿಶ್ಚಲರಾಗಿ ನಿಂತಿದ್ದ ಸೇವಕಿಯರನ್ನು, "ಒಡತಿ ಎಷ್ಟು ಹೊತ್ತಿಂದ ಕಾಣೆಯಾಗಿದ್ದಾಳೆ?" ಎಂದು ವಿಚಾರಿಸಿದ.

"ನಾನು ದೀಪಾನ ಒಳಗೆ ತಂದಾಗ ಆಕೆ ಇರಲಿಲ್ಲ. ಆದರೆ ಆಕೆ ಹೋಗುವುದನ್ನು ಯಾರೂ ನೋಡಲೂ ಇಲ್ಲ." ಎಂದು ನೂ-ಯೀ ತಿಳಿಸಿದಳು.

"ಆಕೆ ಔಷಧಿ ಏನಾದರೂ ತೆಗೆದುಕೊಂಡು ಹೋಗಿದ್ದನ್ನು ಗಮನಿಸಿದಿರಾ?" ಯೀ ಕೇಳಿದ.

"ಇಲ್ಲ ಸ್ವಾಮಿ, ಆದರೆ ಮಧ್ಯಾಹ್ನ ಸ್ವಲ್ಪ ನೀರು ಬೇಕು ಅಂತ ಕೇಳಿದ್ದರು."

ಯೀ ಭಯದಿಂದ ಎದ್ದು ನಿಂತ. ತನ್ನೊಬ್ಬನನ್ನೇ ಭೂಮೀಲಿ ಉಳಿಸಿ ಹೋಗಿದ್ದಾಳೆ ಎನಿಸಿತು.

"ಏನಾದರೂ ಮೇಲೆ ಹಾರೋದನ್ನು ನೋಡಿದೆಯೇನು?" ಯೀ ಕೇಳಿದ.

"ಓಹ್" - ನೂಹ್‌ಸಿನ್‌ಗೆ ಏನೋ ಹೊಳೆದ ಹಾಗಾಯಿತು. "ದೀಪ ಹಚ್ಚಿಟ್ಟು ಹೊರಗೆ ಬರುವಾಗ ಕಪ್ಪು ನೆರಳೊಂದು ಈ ಕಡೆ ಹಾರಿದ್ದನ್ನು ನೋಡಿದೆ. ಅದು ಒಡತೀದು ಇರಬಹುದೆಂದ ನಾನೆಂದೂ ಊಹಿಸಲಿಲ್ಲ." ಅವಳ ಮುಖ ಬಿಳುಚಿಕೊಂಡಿತು.

"ನಾನು ಅಂದುಕೊಂಡ ಹಾಗೇ ಆಗಿರಬೇಕು." ತನ್ನ ತೊಡೆಗಳನ್ನು ತಟ್ಟಿಕೊಂಡು ಎದ್ದುನಿಂತ. ನೂ-ಸಿನ್‌ನ ಕೇಳಬೇಕೆಂದು ಹೊರ ನಡೆದ. "ನೆರಳು ಯಾವ ಕಡೆ ಹಾರಿತು?" ಎಂದ.

ನೂ-ಸಿನ್ ಬೊಟ್ಟು ಮಾಡಿ ದಿಕ್ಕನ್ನು ತೋರಿಸಿದಳು. ಆದರೆ ಅವನಿಗೆ ಕಾಣಿಸಿದ್ದು ಆಕಾಶದಿಂದ ತೂಗು ಹಾಕಿದ್ದ ದುಂಡನೆಯ ಮಂಜು ಬಿಳುಪಿನ ಚಂದ್ರ. ಮತ್ತು ಆ ಬೆಳಕಿನಲ್ಲಿ ಅಸ್ಪಷ್ಟವಾದ ಬಯಲು ಮತ್ತು ಮರಗಳು ಮಾತ್ರ. ಅವನು ಮಗುವಾಗಿದ್ದಾಗ ಅವನ ಅಜ್ಜಿ ಚಂದ್ರನ ಲೋಕದಲ್ಲಿದ್ದ ಸುಂದರ ಪ್ರಕೃತಿಯ ದೃಶ್ಯಗಳನ್ನೆಲ್ಲ ವಿವರಿಸಿ ಹೇಳುತ್ತಿದ್ದಳು. ಇನ್ನೂ ಆ ವಿವರಣೆ ಮಸಕು ಮಸಕಾಗಿ ಅವನ ನೆನಪಿನಲ್ಲಿತ್ತು. ನೀಲ ಸಮುದ್ರದಲ್ಲಿ ತೇಲುತ್ತಿದ್ದ ಚಂದ್ರನನ್ನು ನೋಡುತ್ತಿದ್ದಂತೆ ಅವನ ಕಾಲುಗಳು ಭಾರವೆನಿಸಿದವು.

ಅವನಲ್ಲಿ ಆವೇಶ ಬಂದ ಹಾಗಾಯಿತು. ಇದರಿಂದ ಅವನಿಗೆ ಕೊಲ್ಲಬೇಕೆನಿಸಿತು. ಅಡಿಯಿಂದ ಮುಡಿವರೆಗೆ ಹರಿದ ಸಿಟ್ಟಿನಿಂದ ಸೇವಕಿಯರ ಮೇಲೆ ಅಬ್ಬರಿಸಿದ.

"ನನ್ನ ಬಿಲ್ಲು ತೆಗೆದುಕೊಂಡು ಬನ್ನಿ. ಅದೇ, ನಾನು ಸೂರ್ಯರನ್ನು ಹೊಡೆದಿದ್ದೆನಲ್ಲ! ಹಾಗೆಯೇ ಮೂರು ಬಾಣಗಳನ್ನು ತನ್ನಿ!"

ನೂ-ಯೀ, ನೂ-ಕೆಂಗ್ ಇಬ್ಬರೂ ಭಾರವಾದ ಆ ಬಿಲ್ಲನ್ನು ಕೆಳಗೆ ಇಳಿಸಿ ಧೂಳು ಕೊಡವಿದರು. ಮೂರು ಬಾಣಗಳ ಜೊತೆಗೆ ಅದನ್ನು ಅವನ ಕೈಗೆ ಕೊಟ್ಟರು.

ಬಿಲ್ಲನ್ನು ಒಂದು ಕೈಲಿ ಹಿಡಿದು, ಅದಕ್ಕೆ ಮೂರು ಬಾಣಗಳನ್ನು ಹೂಡಿ, ನೇರವಾಗಿ ಚಂದ್ರನಿಗೆ ಗುರಿಯಿಟ್ಟು ಎಳೆದ. ಬಂಡೆಯ ಮೇಲೆ ಗಟ್ಟಿಯಾಗಿ ಕಾಲೂರಿ ನಿಂತಿದ್ದ. ಅವನ ಕಣ್ಣು ಮಿಂಚನ್ನು ಎಸೆದಿತ್ತು, ಅವನ ಗಡ್ಡ ಮೀಸೆಗಳು ಬೆಂಕಿಯ ಜ್ವಾಲೆಗಳಂತೆ ಗಾಳಿಯಲ್ಲಿ ಹಾರಾಡುತ್ತಿದ್ದವು. ಮತ್ತೊಮ್ಮೆ ಅವನಿಗೆ ಬಹಳ ಬಹಳ ಹಿಂದೆ ಸೂರ್ಯನನ್ನೇ ಹೊಡೆದ ಹೀರೋನಂತೆ ತಾನು ಎನಿಸಿತು.

ಒಂದೇ ಒಂದು ಸೀಟಿ ಕೇಳಿಸಿತು. ಮೂರೂ ಬಾಣಗಳು ಒಂದರ ಹಿಂದೆ ಒಂದು ವೇಗವಾಗಿ, ಬಿಲ್ಲಿನಿಂದ ಹೊರಟವು. ಕಣ್ಣಿಂದ ನೋಡಲಾಗದಷ್ಟು, ಕಿವಿಯಿಂದ ಕೇಳಲಾಗದಷ್ಟು ವೇಗವಾಗಿದ್ದವು ಅವು. ಅವೆಲ್ಲವೂ ಒಂದರ ಹಿಂದೆ ಒಂದು ಇದ್ದದ್ದರಿಂದ ಒಂದೇ ಜಾಗಕ್ಕೆ ತಗುಲಿರಬೇಕು. ಅವು ತಮ್ಮ ಗುರಿಯನ್ನು ತಪ್ಪಬಾರದೆಂಬ ಕಾರಣಕ್ಕೆ ಒಂದೊಂದನ್ನೂ ತೀರಾ ಸ್ವಲ್ಪವಾಗಿ ಬೇರೆ ಬೇರೆ ದಿಕ್ಕಿಗೆ ಜೋಡಿಸಿದ್ದ. ಹಾಗಾಗಿ ಅವು ಮೂರು ಬಾಣಗಳೂ ಮೂರು ದಿಕ್ಕುಗಳಿಂದ ಹೊರಟು ಮೂರು ಕಡೆ ಘಾಸಿ ಮಾಡುವುದು ಖಚಿತವಾಗಿತ್ತು.

ಸೇವಕಿಯರು ಚಿಟ್ಟನೆ ಚೀರಿದರು. ಚಂದ್ರ ನಡುಗುತ್ತಿದ್ದಂತೆ ಮತ್ತು ಇನ್ನೇನು ಬಿದ್ದೇ ಬಿಡುತ್ತಿದ್ದಾನೆಂಬಂತೆ ಕಾಣಿಸಿತು. ಆದರೆ ಹಾಗೇನೂ ಆಗದೆ ಚಂದ್ರ ಪ್ರಶಾಂತವಾಗಿ ತಣ್ಣನೆಯ ಬೆಳಕನ್ನು ಚೆಲ್ಲುತ್ತ, ಕಿಂಚಿತ್ತೂ ಊನಗೊಳ್ಳದೆ ಹೊಳೆಯುತ್ತಿದ್ದ.

ಆಕಾಶದೆಡೆಗೆ ನೋಡಿ ಶಾಪ ಹಾಕುವಂತೆ ತಲೆ ಹೊರಳಿಸಿದ ಅವನು ಚಂದ್ರನನ್ನು ನೋಡುತ್ತ ಕಾದ. ಆದರೆ ಚಂದ್ರ ಅವನ ಕಡೆ ಲಕ್ಷ್ಯ ಕೊಡಲಿಲ್ಲ. ಅವನು ಮೂರು ಹೆಜ್ಜೆ ಮುಂದೆ ಹೋದರೆ, ಚಂದ್ರ ಮೂರು ಹೆಜ್ಜೆ ಹಿಂದೆ ಬಿದ್ದ. ಮೂರು ಹೆಜ್ಜೆ ಹಿಂದೆ ಹೋದರೆ, ಚಂದ್ರ ಮೂರು ಹೆಜ್ಜೆ ಮುಂದೆ ಬಂದ.

ಇಬ್ಬರೂ ಮೌನವಾಗಿ ಒಬ್ಬರನ್ನೊಬ್ಬರು ನೋಡಿದರು. ಅವನು ಕೂತು ನಿಟ್ಟುಸಿರಿಟ್ಟ. "ಸರಿ ಬಿಡಿ, ನಿಮ್ಮ ಒಡತಿ ಇನ್ನು ಮುಂದೆ ಯವಾಗಲೂ ಸುಖವಾಗಿ ಇರ್‍ತಾಳೆ. ನನ್ನೊಬ್ಬನನ್ನು ಇಲ್ಲಿ ಬಿಟ್ಟು ಅಲ್ಲಿಗೆ ತಾನೊಬ್ಬಳೇ ಹಾರಿ ಹೋಗಲು ಮನಸ್ಸಾದರೂ ಹೇಗೆ ಬಂತು? ಯಾಕೆ ನನಗೆ ವಯಸ್ಸಾಗಿ ಹೋಯಿತು ಅಂತ ಅನ್ನಿಸ್ತಾ? ಹೋದ ತಿಂಗಳೇ ಹೇಳಿದ್ದಳಲ್ಲ! ನೀನೇನೂ ಮುದುಕ ಆಗಿ ಹೋಗಿಲ್ಲ. ಹಾಗೇನಾದರೂ ವಯಸ್ಸಾಗಿದೆ, ಮುದುಕ ಆಗಿದ್ದೇನೆ ಎಂದುಕೊಂಡರೆ ಅದು ಮನಸ್ಸಿನ ದೌರ್ಬಲ್ಯ ಅಷ್ಟೆ!" ಎಂದಿದ್ದಳು.

"ಹಾಗೇನೂ ಇರಲಾರದು" ನೂ-ಯೀ ಹೇಳಿದಳು.

"ಜನ ಈಗಲೂ ನಿಮ್ಮನ್ನು ಹೀರೋ ಅಂತಲೇ ತಿಳೀತಿದ್ದಾರೆ ಸ್ವಾಮಿ."

"ಹೇ, ಒಂದೊಂದು ಸಲ ನೀನು ಒಳ್ಳೇ ಕವಿ ಥರ ಕಾಣಿಸ್ತೀಯ" ನೂ-ಸಿನ್ ಹೇಳಿದಳು.

"ಏನಿಲ್ಲ ಸುಮ್ಮಿರು. ವಿಷಯ ಏನೂಂದ್ರೆ, ನೂಡಲ್ಸ್ ಮತ್ತು ಕಾಗೆ ಸೂಪ್ ತಿನ್ನೋದು ಸಾಧ್ಯ ಆಗ್ತಿರಲಿಲ್ಲ. ಅದು ಅವಳ ತಪ್ಪಲ್ಲ...."

ಆ ಚಿರತೆ ಚರ್ಮ ಒಂದು ಕಡೆ ಹರಿದು ಹೋಗಿದೆ. ಗೋಡೆ ಕಡೆಗಿರೋ ಕಾಲಿನಿಂದ ಒಂದು ಚೂರು ಕತ್ತರಿಸಿ, ಹೊಲಿಗೆ ಹಾಕಿ ಸರಿ ಮಾಡ್ತೀನಿ. ನೋಡೋಕೆ ಆಗ ಚೆನ್ನಾಗಿರುತ್ತೆ." ನೂಸಿನ್ ಒಳಗೆ ನಡೆದಳು.

"ಸ್ವಲ್ಪ ಇರು." ಯೀ ಹೇಳಿ ಯೋಚಿಸಿದ. ಈಗ ಅದಕ್ಕೆ ಅವಸರ ಇಲ್ಲ. ನಾನು ಹಸಿವಿನಿಂದ ಸಾಯ್ತಿದ್ದೀನಿ. ಬೇಗ ಹೋಗಿ ಕೋಳಿ ಮತ್ತು ಪಾಪ್ರಿಕಾ ಹಾಕಿ ಏನಾದರೂ ಪಲ್ಯಮಾಡಿ, ದೋಸೆ ಮಾಡು. ತಿಂದಾದ ಮೇಲೆ ಮಲಗಲು ಹೋಗ್ತೀನಿ. ನಾಳೆ ಹೋಗಿ ಮತ್ತೆ ಆ ಪೂಜಾರೀನ ಸಿದ್ಧರಸ ಕೊಡೋಕೆ ಹೇಳ್ತೀನಿ. ನಾನೂ ಅದರಿಂದ ಅವಳ ಹಿಂದೆ ಹೋಗಬಹುದು. ಬ್ಯಾಂಗ್ ಷೆಂಗ್‌ಗೆ ಹೇಳು, ನನ್ನ ಕುದುರೆಗೆ ನಾಲ್ಕು ಸೇರು ಹುರುಳಿ ತಿನ್ನಿಸಲಿ!"

~~~~o
~~~~



ಡಾ॥ ವಿಜಯ ಸುಬ್ಬರಾಜ್

# ಲುಷೆನ್‌ರ ಎರಡು ನೀಳ್ಗತೆಗಳು

ಅಕ್ಷಯ ಪಬ್ಲಿಷರ್ಸ್
ನಂ. 87, ಗಿರಿನಗರ 3ನೇ ಹಂತ
ಬೆಂಗಳೂರು - 560 085